# ಆರಾಧನೆಗಳ ಸಂಶೋಧನಾತ್ಮಕ ಅಧ್ಯಯನ

ಲೇಖಕರು

ಮೌ| ಸೈಯದ್ ಅಬುಲ್ ಆಲಾ ಮೌದೂದಿ

ಅನುವಾದಕರು

ಬಿ.ಎಸ್. ಶರ್ಫುದ್ದೀನ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಆರಾಧನೆ ಎಲ್ಲ ಮತಧರ್ಮಗಳಲ್ಲೂ ಇದೆ. ಆದರೆ ಅವು ಕೇವಲ ಆತ್ಮೋನ್ನತಿಯ ಉಪಾಧಿಗಳೆಂದು ಇತರ ಮತಧರ್ಮಗಳು ಭಾವಿಸಿದರೆ, ಇಸ್ಲಾಮ್ ಆರಾಧನಾ ಕರ್ಮಗಳು ಆತ್ಮೋನ್ನತಿಯ ಜೊತೆಗೆ ಬದುಕಿನ ಸಂಸ್ಕಾರ ಮತ್ತು ವಿಕಾಸಕ್ಕೆ ಪೂರಕವೆಂದು ಬಾವಿಸುತ್ತದೆ. ಮುಸ್ಲಿಮರೆಲ್ಲರೂ ಆರಾಧನೆ ಮಾಡುತ್ತಾರೆ. ಆ ಪೈಕಿ ಎರಡು ಪ್ರಮುಖ ಆರಾಧನೆಗಳಾದ ನಮಾಝ್ ಮತ್ತು ಉಪವಾಸ ವ್ರತವನ್ನು ಸ್ತ್ರೀ-ಪುರುಷ, ಬಡವ-ಬಲ್ಲಿದರೆಂಬ ಭೇದವಿಲ್ಲದೆ ಸಕಲ ಮುಸ್ಲಿಮರೂ ಆಚರಿಸುತ್ತಾರೆ. ಝಕಾತ್ ಮತ್ತು ಹಜ್ಜ್‌ಕರ್ಮಗಳು ಸ್ಥಿತಿವಂತರ ಮೇಲೆ ಮಾತ್ರ ಕಡ್ಡಾಯವಾಗಿದೆ. ಆದರೆ ಈ ಎಲ್ಲ ಆರಾಧನಾ ಕರ್ಮಗಳು ಇಂದು ಕೇವಲ ಧಾರ್ಮಿಕ ಸಂಪ್ರದಾಯಗಳಾಗಿ ಉಳಿದಿವೆ. ಈ ಆರಾಧನೆಗಳ ಉದ್ದೇಶ ಮತ್ತು ಅವುಗಳಲ್ಲಿ ಅಡಕವಾಗಿರುವ ಯುಕ್ತಿಯನ್ನು ಹೆಚ್ಚಿನವರು ಗಮನಿಸುವುದಿಲ್ಲ. ಆದುದರಿಂದ ಈ ಆರಾಧನೆಗಳಿಂದ ಲಭಿಸಬೇಕಾದ ಪ್ರಯೋಜನಗಳು ಗೋಚರವಾಗುವುದಿಲ್ಲ. ಇದರಿಂದ ಆರಾಧನೆಗಳಲ್ಲಿ ಜನರಿಗೆ ಆಸಕ್ತಿಯೂ ಕಡಿಮೆಯಾಗುತ್ತಾ ಹೋಗುತ್ತಿದೆ. ವಿಶೇಷವಾಗಿ ಆಧುನಿಕ ಜಗತ್ತಿನ ಯುವ ಜನಾಂಗವು ಇಸ್ಲಾಮಿನ ಕಟ್ಟು ನಿಟ್ಟಾದ ಆರಾಧನಾ ಕ್ರಮಗಳನ್ನು ವ್ಯರ್ಥ ಹೊರೆಯೆಂದು ಭಾವಿಸುತ್ತಿದೆ.

ಆದುದರಿಂದ ಇಸ್ಲಾಮೀ ಆರಾಧನೆಗಳ ನೈಜ ಗುರಿಯನ್ನು ಅರಿತು ಅದನ್ನು ನಿರ್ವಹಿಸಬೇಕಾದ ಸ್ಫೂರ್ತಿಯನ್ನು ಮುಸ್ಲಿಮರು ಮೈಗೂಡಿಸಬೇಕಾಗಿದೆ.

ನಿಮ್ಮ ಕೈಯಲ್ಲಿರುವ ಈ ಕೃತಿಯು ಅದನ್ನೇ ಪ್ರಸ್ತುತ ಪಡಿಸುತ್ತದೆ. ಇಸ್ಲಾಮೀ ಆರಾಧನೆಗಳನ್ನು ನೈಜ ಸ್ಫೂರ್ತಿಯೊಂದಿಗೆ ನಿರ್ವಹಿಸಿದರೆ ಅದು ವ್ಯಕ್ತಿಯ ಸರ್ವತೋಮುಖ ಸುಧಾರಣೆ, ಉತ್ತಮ ಸಮಾಜದ ನಿರ್ಮಾಣ ಮತ್ತು ಅಲ್ಲಾಹನು ಬಯಸುವ ಅತ್ಯುತ್ತಮ ಜೀವನ ವ್ಯವಸ್ಥೆಯ ನಿರ್ಮಾಣಕ್ಕೆ ಮನುಷ್ಯನನ್ನು ಹೇಗೆ ಸಿದ್ಧಪಡಿಸುತ್ತದೆ ಎಂಬುದನ್ನು ಈ ಕೃತಿಯಲ್ಲಿ ಮನ ಮುಟ್ಟುವ ಶೈಲಿಯಲ್ಲಿ ವಿವರಿಸಲಾಗಿದೆ. ಇದರಿಂದ ಸರ್ವರಿಗೂ ಪ್ರಯೋಜನವಾಗಲೆಂದು ಹಾರೈಸುತ್ತೇವೆ.

- ಶಾಂತಿ ಪ್ರಕಾಶನ

# ಅನುಕ್ರಮಣಿಕೆ



\- - - - - - - - - - - - - -

# ಪ್ರಸ್ತಾವನೆ

ಈ ಕೃತಿಯಲ್ಲಿ ಚರ್ಚಿಸಲಾಗಿರುವ ವಿಷಯದ ಬಗ್ಗೆ ಈ ಹಿಂದೆ ನನ್ನ 'ಖುತ್ಬಾತ್' ಎಂಬ ಕೃತಿಯಲ್ಲಿ ನಾನು ಬೆಳಕು ಚೆಲ್ಲಿದ್ದೇನೆ. ಆದರೆ ಆಗ ಜನಸಾಮಾನ್ಯರು ನನ್ನ ಅಭಿಸಂಬೋಧಿತರಾಗಿದ್ದರು. ಅವರಿಗೆ ಯಾವುದೇ ವಿಷಯವನ್ನು ಆಳವಾಗಿ ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ ನಾನು ವಿಷಯವನ್ನೂ ಸರಳ ಚರ್ಚೆಗಷ್ಟೇ ಸೀಮಿತಗೊಳಿಸಬೇಕಾಗಿತ್ತು. ಅನಂತರ ವಿದ್ಯಾವಂತರು ಮತ್ತು ಬುದ್ಧಿಜೀವಿಗಳಿಗಾಗಿ ಈ ವಿಷಯದಲ್ಲಿ ಪ್ರತ್ಯೇಕ ಲೇಖನ ಬರೆಯುವ ಆವಶ್ಯಕತೆಯನ್ನು ನಾನು ಮನಗಂಡೆ. ಆ ಮೂಲಕ ಆರಾಧನೆಗಳಿಗೆ ಸಂಬಂಧಪಟ್ಟಂತೆ ಹೆಚ್ಚು ಆಳವಾದ ಅರ್ಥವನ್ನು ಅವರ ಮುಂದೆ ಸಮರ್ಪಿಸಬಹುದಾಗಿದೆ.

ಆದರೆ ಇದರಲ್ಲಿ ಇನ್ನಷ್ಟು ಸೇರ್ಪಡೆಗೆ ಆಸ್ಪದವಿದೆ. ಆರಾಧನೆಗಳಲ್ಲಿ ಅಡಕವಾಗಿರುವ ಸಮಸ್ತ ವಾಸ್ತವಿಕತೆಗಳನ್ನು ಇದರಲ್ಲಿ ಸೇರಿಸಲಾಗಿಲ್ಲ. ಬಹುತೇಕ ವಿದ್ಯಾವಂತ ವರ್ಗದ ವೈಚಾರಿಕ ಸಂತೃಪ್ತಿಗೆ ಇಲ್ಲಿ ಪ್ರಸ್ತಾವಿಸಲಾದ ವಿಷಯ ಪರ್ಯಾಪ್ತವಿದೆ ಎಂದು ನಾನು ಭಾವಿಸುತ್ತೇನೆ.

ಇಲ್ಲಿ ನಮಾಝ್ ಮತ್ತು ಉಪವಾಸ ವ್ರತದ ಕುರಿತು ನನ್ನೆರಡು ಲೇಖನಗಳನ್ನು ಪ್ರಕಟಿಸಲಾಗುತ್ತಿದೆ. ಝಕಾತ್ ಮತ್ತು ಹಜ್ಜ್‌ನ ಕುರಿತು ಇನ್ನಷ್ಟೇ ಚರ್ಚಿಸಬೇಕಾಗಿದೆ. ಆದರೆ ಅದಕ್ಕೆ ಸೂಕ್ತ ಸಂದರ್ಭವನ್ನು ಕಾಯುತ್ತಿದ್ದೇನೆ. ಈಗಾಗಲೇ ಬರೆಯಲಾಗಿರುವುದನ್ನು, ಇನ್ನು ಬರೆಯಲಿಕ್ಕಿರುವುದರ ನಿರೀಕ್ಷೆಯಲ್ಲಿ ತಡೆಹಿಡಿಯಬಾರದು ಎಂಬುದು ನಮ್ಮ ಮಿತ್ರವೃಂದದ ಅಭಿಪ್ರಾಯವಾಗಿದೆ. ಆದ್ದರಿಂದ ಈ ಕೃತಿಯನ್ನು ವಾಚಕರ ಮುಂದಿಡಲಾಗುತ್ತಿದೆ.

-ಸೈಯದ್ ಅಬುಲ್ ಆಲಾ.

# ಆರಾಧನೆಯ ನಿಜಾರ್ಥ

ಪವಿತ್ರ ಕುರ್‌ಆನ್‌ನ ಪ್ರಕಾರ ಮಾನವನನ್ನು ಸೃಷ್ಟಿಸಲಾಗಿರುವುದರ ನೈಜ ಉದ್ದೇಶವೇ 'ಇಬಾದತ್' ಆಗಿದೆ.

وَمَا خَلَقْتُ الْجِنَّ وَالْإِنسَ إِلَّا لِيَعْبُدُونِ -

"ನಾನು ಜಿನ್ನ್‌ಗಳನ್ನೂ ಮನುಷ್ಯರನ್ನೂ ಸೃಷ್ಟಿಸಿರುವುದು ನನ್ನ ಇಬಾದತ್(ದಾಸ್ಯ ಮತ್ತು ಆರಾಧನೆ)ಗಾಗಿ ಹೊರತು ಬೇರಾವುದೇ ಕಾರ್ಯಕ್ಕಾಗಿ ಅಲ್ಲ." (51:56)

ಪ್ರವಾದಿಗಳನ್ನು ಭೂಮಿಗೆ ಕಳುಹಿಸಲಾದುದರ ಉದ್ದೇಶವೂ ಮಾನವರನ್ನು ದೇವನ ದಾಸ್ಯ ಮತ್ತು ಆರಾಧನೆಯ ಕಡೆಗೆ ಕರೆಯುವುದೇ ಆಗಿತ್ತು.

أَنِ اعْبُدُوا اللَّهَ وَاجْتَنِبُوا الطَّاغُوتَ

"ಅಲ್ಲಾಹನ ದಾಸ್ಯೋಪಾಸನೆ ಮಾಡಿರಿ ಮತ್ತು ತಾಗೂತ್‌ನಿಂದ (ಮಿಥ್ಯ ದೇವರುಗಳಿಂದ) ದೂರವಿರಿ." (ಕುರ್‌ಆನ್- 16:36)

ಹಾಗಾದರೆ 'ಆರಾಧನೆ' ಎಂದರೇನು? ಹಾಗೆಯೇ ಇಸ್ಲಾಮಿನಲ್ಲಿ ಕಡ್ಡಾಯಗೊಳಿಸಲಾಗಿರುವ ಆರಾಧನೆಗಳ ನೈಜ ಸ್ಫೂರ್ತಿ ಏನು? ಎಂದು ತಿಳಿಯುವುದು ನಮ್ಮ ಪಾಲಿಗೆ ಅತ್ಯವಶ್ಯಕವಾಗಿದೆ. ಅನ್ಯಥಾ ನಮ್ಮನ್ನು ಯಾವ ಉದ್ದೇಶಕ್ಕಾಗಿ ಸೃಷ್ಟಿಸಲಾಗಿದೆಯೋ ಆ ಉದ್ದೇಶವನ್ನು ಸಾಧಿಸುವಲ್ಲಿ ನಾವು ವಿಫಲರಾದಂತಾಗುತ್ತದೆ.

## ಆರಾಧನೆಯ ಅಜ್ಞಾನಜನ್ಯ ಕಲ್ಪನೆ

ಇಸ್ಲಾಮಿನಲ್ಲಿ 'ಇಬಾದತ್' ಎಂಬ ಪದ ಕೇವಲ ಆರಾಧನೆಯ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿಲ್ಲ. ದಾಸ್ಯ ಎಂಬ ಅರ್ಥವೂ ಅದರಲ್ಲಿ ಅಡಕವಾಗಿದೆ. 'ಇಬಾದತ್' ಅಥವಾ ದಾಸ್ಯೋಪಾಸನೆಯನ್ನು ಕೇವಲ ಉಪಾಸನೆಯೆಂದು ಬಗೆಯುವುದು ಅಜ್ಞಾನ ಜನ್ಯ ಕಲ್ಪನೆಯಾಗಿದೆ. ಅಜ್ಞಾನಿಗಳು ತಮ್ಮ ಆರಾಧ್ಯರನ್ನು ಮಾನವರಂತೆ ಕಲ್ಪಿಸುತ್ತಾರೆ. ದೊಡ್ಡ ವ್ಯಕ್ತಿಗಳು, ಸರದಾರರು ಮತ್ತು ರಾಜ ಮಹಾರಾಜರು ಉಪಚಾರದಿಂದ ಸಂತುಷ್ಟರಾಗುತ್ತಾರೆ, ಕಾಣಿಕೆ ಸಲ್ಲಿಸಿದರೆ ಕೃಪೆ ತೋರುತ್ತಾರೆ, ವಿನಯ ಮತ್ತು ವಿನೀತ ಭಾವದೊಂದಿಗೆ ಕೈಜೋಡಿಸಿದರೆ ಪ್ರಭಾವಿತರಾಗುತ್ತಾರೆ ಮತ್ತು ಅನಂತರ ಅವರಿಂದ ನಮ್ಮ ಬೇಳೆ ಬೇಯಿಸಿಕೊಳ್ಳಬಹುದಾಗಿದೆ. ಅದೇ ರೀತಿ, ಆರಾಧ್ಯ ದೇವರಿಗೆ ಉಪಚಾರ, ಕಾಣಿಕೆ ಮತ್ತು ವಿನೀತತೆಯನ್ನು ಪ್ರಕಟಿಸಬೇಕಾಗಿದೆ ಎಂದು ಅಜ್ಞಾನಿಗಳು ಭಾವಿಸುತ್ತಾರೆ. ಈ ಉಪಾಯಗಳ ಮೂಲಕ ದೇವಕೃಪೆಯನ್ನು ಗಳಿಸಬಹುದು, ದೇವರನ್ನು ಒಲಿಸಿ ನಮ್ಮ ಕೆಲಸ ಸಾಧಿಸಬಹುದು ಎಂದು ಅವರು ಭಾವಿಸುತ್ತಾರೆ. ಆದ್ದರಿಂದಲೇ ಅಜ್ಞಾನಜನ್ಯ ಧರ್ಮಗಳಲ್ಲಿ ನಿರ್ದಿಷ್ಟ ಸಮಯದಲ್ಲಿ ನಿರ್ದಿಷ್ಟ ಆರಾಧನಾ ಕರ್ಮಗಳನ್ನು ಪಾಲಿಸುವುದನ್ನೇ 'ಆರಾಧನೆ' ಎಂದು ಕರೆಯಲಾಗುತ್ತದೆ.

## ಆರಾಧನೆಯ ಸನ್ಯಾಸೀ ಕಲ್ಪನೆ

ಮಾನವ ಲೌಕಿಕ ಜೀವನದಿಂದ ದೂರ ಸರಿದು ದೇವನಲ್ಲಿ ಮನಸ್ಸನ್ನು ಕೇಂದ್ರೀಕರಿಸಬೇಕು. ಧ್ಯಾನ, ಆತ್ಮ ನಿಗ್ರಹ ಮತ್ತು ಆಧ್ಯಾತ್ಮಿಕ ಕಸರತ್ತುಗಳ ಮೂಲಕ ತನ್ನ ಸುಪ್ತ ಶಕ್ತಿಯನ್ನು ವೃದ್ಧಿಸಿಕೊಳ್ಳಬೇಕು, ಜ್ಞಾನೋದಯ ಮತ್ತು ಚಮತ್ಕಾರಗಳ ಶಕ್ತಿಯನ್ನು ತನ್ನಲ್ಲಿ ಬೆಳೆಸಿಕೊಳ್ಳಬೇಕು, ಗೃಹಸ್ಥಾಶ್ರಮದ ಜವಾಬ್ದಾರಿಕೆಗಳಿಂದ ಮುಕ್ತನಾಗಿ ಪಾರಮಾರ್ಥಿಕ ಮೋಕ್ಷ ಗಳಿಸಬೇಕು- ಎಂದು ಮುಂತಾದ ಆರಾಧನೆಯ ಕಲ್ಪನೆಯೂ ಇಸ್ಲಾಮಿನಲ್ಲಿಲ್ಲ.

ಆರಾಧನೆಯ ಈ ಕಲ್ಪನೆ 'ಜೀವನದ ಸನ್ಯಾಸೀ ದೃಷ್ಟಿಕೋನ'ದಲ್ಲಧಿಷ್ಠಿತವಾದ ಧರ್ಮಗಳಲ್ಲಿ ಕಂಡು ಬರುತ್ತದೆ. ಅವರ ಪ್ರಕಾರ ಈ ಲೋಕವು ಮಾನವನ ಪಾಲಿಗೆ ಕಾರಾಗೃಹವಾಗಿದೆ. ದೇಹವು ಆತ್ಮದ ಪಾಲಿಗೆ ಪಂಜರವಾಗಿದೆ. ಲೌಕಿಕತೆ ಮತ್ತು ಧಾರ್ಮಿಕತೆ ಪರಸ್ಪರ ತದ್ವಿರುದ್ಧವಾಗಿವೆ. ಅವರು ಲೌಕಿಕ ಜೀವನ, ಅದರ ಹೊಣೆಗಾರಿಕೆಗಳು ಮತ್ತು ಸಂಬಂಧಗಳ ಹೊರಗೆ ಮೋಕ್ಷ ಮಾರ್ಗವನ್ನು ಹುಡುಕುತ್ತಾರೆ. ಅವರ ಪ್ರಕಾರ ಆಧ್ಯಾತ್ಮಿಕ ಪ್ರಗತಿಗೆ ಭೌತಿಕ ಅಧೋಗತಿ ಅಥವಾ ಭೌತಿಕತೆಯಿಂದ ಸಂಬಂಧ ಕಡಿದುಕೊಳ್ಳುವುದು ಅನಿವಾರ್ಯವಾಗಿದೆ.

## ಆರಾಧನೆಯ ಇಸ್ಲಾಮೀ ಕಲ್ಪನೆ

ಆರಾಧನೆಯ ಇಸ್ಲಾಮೀ ಕಲ್ಪನೆ ಪ್ರಸ್ತುತ ಎರಡು ಕಲ್ಪನೆಗಳಿಗಿಂತಲೂ ಭಿನ್ನವಾದುದು. ಇಸ್ಲಾಮಿನ ಪ್ರಕಾರ ಮಾನವ ಏಕದೇವನ ದಾಸನಾಗಿದ್ದಾನೆ. ಸರ್ವಲೋಕದೊಡೆಯನೇ ಅವನ ಸೃಷ್ಟಿಕರ್ತ, ಒಡೆಯ ಮತ್ತು ಅನ್ನದಾತನಾಗಿದ್ದಾನೆ. ದೇವನು ಅವನನ್ನು ಭೂಮಿಯಲ್ಲಿ ತನ್ನ ಪ್ರತಿನಿಧಿಯಾಗಿ ನೇಮಿಸಿದ್ದಾನೆ. ಕೆಲವು ಅಧಿಕಾರಗಳನ್ನು ಇಲ್ಲಿ ಅವನಿಗೆ ಪ್ರದಾನಿಸಿದ್ದಾನೆ. ಕೆಲವು ಹೊಣೆಗಾರಿಕೆ ಮತ್ತು ಸೇವೆಗಳನ್ನು ಅವನಿಗೆ ವಹಿಸಿ ಕೊಟ್ಟಿದ್ದಾನೆ. ತನ್ನ ಸಾಮ್ರಾಜ್ಯದ ಕ್ಷೇತ್ರವೊಂದರಲ್ಲಿ ಅವನಿಗೆ ಸ್ವಲ್ಪ ಅಧಿಕಾರವನ್ನು ದಯಪಾಲಿಸಿದ್ದಾನೆ. ಅವನ ಕೆಲಸ ತನ್ನ ಒಡೆಯನ ಉದ್ದೇಶವನ್ನು ಈಡೇರಿಸುವುದಾಗಿದೆ. ತನ್ನ ಹೊಣೆಗಾರಿಕೆಗಳನ್ನು ಅರಿತು ಅದನ್ನು ನೆರವೇರಿಸುವುದಾಗಿದೆ. ತನ್ನೊಡೆಯನು ವಹಿಸಿಕೊಟ್ಟಿರುವ ಸೇವೆಗಳನ್ನು ಸಲ್ಲಿಸುವುದಾಗಿದೆ. ತನ್ನ ಅಧಿಕಾರ ಮತ್ತು ಅರ್ಹತೆಗಳನ್ನು ನೈಜ ಒಡೆಯನ ಕಾನೂನು ಮತ್ತು ಅವನ ಇಚ್ಛೆಗೆ ಅನುಸಾರ ಉಪಯೋಗಿಸುವುದಾಗಿದೆ. ಭೂಲೋಕದ ಜೀವನದಲ್ಲಿ ಎಷ್ಟು ಸಕ್ರಿಯತೆ ಮತ್ತು ತನ್ಮಯತೆಯೊಂದಿಗೆ ಅವನು ತನ್ನ ಹೊಣೆಗಾರಿಕೆಗಳನ್ನು ನಿಭಾಯಿಸುವನೋ, ತನಗೆ ಸಂಬಂಧಪಟ್ಟ ಸೇವೆಗಳನ್ನು ಸಲ್ಲಿಸುವನೋ ಎಷ್ಟು ನಿಷ್ಠೆ ಮತ್ತು ವಿಧೇಯತೆಯೊಂದಿಗೆ, ತನ್ನ ಅಧಿಕಾರಗಳ ಉಪಯೋಗದಲ್ಲಿ ಒಡೆಯನ ಕಾನೂನುಗಳನ್ನು ಅನುಸರಿಸುವನೋ, ಅಷ್ಟೇ ಅವನು ಯಶಸ್ವಿಯಾಗಿರುವನು. ತನಗೆ ನೀಡಲಾಗಿದ್ದ ಜೀವಿತಾವಧಿಯನ್ನು ಮುಗಿಸಿ ದೇವನ ಮುಂದೆ ವಿಚಾರಣೆಗೆ ಹಾಜರಾಗುವಾಗ ಅವನ ಜೀವನದ ಸಾಧನೆಗಳಿಂದ ಅವನೊಬ್ಬ ಕರ್ತವ್ಯ ನಿಷ್ಠ, ಅನುಸರಣಶೀಲ ದಾಸನೆಂದು ಸಾಬೀತಾಗಬೇಕು. ಸೋಮಾರಿ, ಮೈಗಳ್ಳ, ಬೇಜವಾಬ್ದಾರಿಯುತ ಮತ್ತು ಬಂಡುಕೋರನೆಂದು ಸಾಬೀತಾಗಬಾರದು. ಇದರಲ್ಲೇ ಅವನ ಪರಲೋಕ ಜೀವನದ

ಹಿತ ಅಡಕವಾಗಿದೆ.

ಈ ದೃಷ್ಟಿಕೋನದಿಂದ ನೋಡುವುದಾದರೆ- ಆರಂಭದಲ್ಲಿ ಪ್ರಸ್ತಾವಿಸಲಾಗಿರುವ ಆರಾಧನೆಯ ಎರಡೂ ಕಲ್ಪನೆಗಳು ಶುದ್ಧ ತಪ್ಪು ಕಲ್ಪನೆಗಳೆಂದು ವ್ಯಕ್ತವಾಗುತ್ತದೆ. ಒಬ್ಬ ವ್ಯಕ್ತಿ ತನಗೆ ನೀಡಲಾಗಿರುವ ಸಮಯದಲ್ಲಿ ಸ್ವಲ್ಪ ಸಮಯವನ್ನು ಪ್ರತ್ಯೇಕಗೊಳಿಸಿ, ಆ ಅಲ್ಪಾವಧಿಯಲ್ಲಿ ಆರಾಧನೆಯ ನಿರ್ದಿಷ್ಟ ಕರ್ಮಗಳನ್ನು ಪಾಲಿಸುತ್ತಾನೆ. ಅನಂತರ ನಾನು ದೇವನ ಹಕ್ಕನ್ನು ಸಲ್ಲಿಸಿದ್ದೇನೆ, ಇನ್ನು ಜೀವನದ ವ್ಯವಹಾರಗಳನ್ನು ಹೇಗೆ ಬೇಕಾದರೂ ಪೂರ್ತೀಕರಿಸಲು ಸ್ವತಂತ್ರನಾಗಿದ್ದೇನೆ ಎಂದು ಭಾವಿಸುತ್ತಾನೆ. ಅವನ ಉಪಮೆ ಹೇಗಿದೆಯೆಂದರೆ, ಒಬ್ಬ ನೌಕರನನ್ನು ನೀವು ದಿನ-ರಾತ್ರಿಗಳ ನೌಕರಿಗೆ ನೇಮಿಸಿದ್ದೀರಿ. ಅವನಿಗೆ ಸಂಬಳಕೊಟ್ಟು ಪೋಷಿಸುತ್ತಿದ್ದೀರಿ. ಅವನು ಪ್ರತಿನಿತ್ಯ ಬೆಳಗ್ಗೆ ಮತ್ತು ಸಂಜೆ ನಿಮಗೆ ಡೊಗ್ಗು ಸಲಾಮು ಹೊಡೆಯುತ್ತಾನೆ. ಅನಂತರ ತನಗೆ ಮನ ಬಂದಂತೆ ಎಲ್ಲಿ ಬೇಕಾದರೂ ಅಡ್ಡಾಡುತ್ತಾನೆ. ಯಾರ ಚಾಕರಿಯನ್ನು ಬೇಕಾದರೂ ಮಾಡುತ್ತಾನೆ. ಲೋಕದ ಎಲ್ಲ ವ್ಯವಹಾರಗಳಿಂದ ದೂರ ಸರಿದು ಮೂಲೆ ಸೇರುವ ಮತ್ತು ತನ್ನೆಲ್ಲಾ ಸಮಯವನ್ನು ನಮಾಝ್, ಉಪವಾಸ ವ್ರತ, ಕುರ್‌ಆನ್ ಪಠನ ಮತ್ತು ಜಪತಪಗಳಲ್ಲಿ ವ್ಯಯಿಸುವವರ ವಿಷಯವೂ ಅಷ್ಟೇ. ಅವರ ಉಪಮೆ ಹೇಗಿದೆಯೆಂದರೆ, ನೀವು ಒಬ್ಬನನ್ನು ನಿಮ್ಮ ತೋಟದ ಮೇಲ್ವಿಚಾರಣೆಗಾಗಿ ನೇಮಿಸಿದ್ದೀರಿ- ಆದರೆ ಅವನು ತೋಟಗಾರಿಕೆಯ ಕೆಲಸವನ್ನು ಬಿಟ್ಟು ಸದಾ ನಿಮ್ಮ ಮುಂದೆ ಕೈ ಕಟ್ಟಿ ನಿಲ್ಲುತ್ತಾನೆ. ಬೆಳಗ್ಗಿನಿಂದ ಸಂಜೆಯ ತನಕ ಮತ್ತು ಸಂಜೆಯಿಂದ ಮರುದಿನದ ಮುಂಜಾವಿನ ತನಕ 'ಪ್ರಭು, ಪ್ರಭು' ಎಂದು ಕೂಗಿ ಕರೆಯುತ್ತಿರುತ್ತಾನೆ. ತೋಟಗಾರಿಕೆಯ ಕುರಿತು ನೀವು ನೀಡಿದ ಆದೇಶಗಳನ್ನು ಅತ್ಯಂತ ಸುಶ್ರಾವ್ಯವಾಗಿ ನಿಂತು-ನಿಂತು ಉಚ್ಚರಿಸುತ್ತಿರುತ್ತಾನೆ. ಆದರೆ ಆ ಆದೇಶಗಳಂತೆ ತೋಟದ ಅಭಿವೃದ್ಧಿಯ ದಿಸೆಯಲ್ಲಿ ಯಾವ ಕೆಲಸವನ್ನೂ ಮಾಡುವುದಿಲ್ಲ.

ಇಂತಹ ನೌಕರರ ಬಗ್ಗೆ ನೀವು ಯಾವ ಭಾವನೆಯನ್ನು ತಳೆಯುತ್ತೀರೋ ಅದೇ ಭಾವನೆಯನ್ನು ಇಸ್ಲಾಮ್ ಮೇಲೆ ಪ್ರಸ್ತಾವಿಸಲಾದಂತಹ ಆರಾಧಕರ ಬಗ್ಗೆ ತಳೆಯುತ್ತದೆ. ಅಂತಹ ನೌಕರರ ಬಗ್ಗೆ ಯಾವ ರೀತಿಯ ವ್ಯವಹಾರವನ್ನು ನೀವು ಕೈಗೊಳ್ಳುತ್ತೀರೋ, ಅದೇ ರೀತಿಯ ವ್ಯವಹಾರವನ್ನು ಮಿಥ್ಯ ಕಲ್ಪನೆಗಳ ಆಧಾರದಲ್ಲಿ ಆರಾಧನೆ ಕೈಗೊಳ್ಳುವವರೊಂದಿಗೆ ದೇವನೂ ಕೈಗೊಳ್ಳುತ್ತಾನೆ.

ನೀವು ನಿಮ್ಮ ಸಮಸ್ತ ಜೀವನವನ್ನು ಅಲ್ಲಾಹನ ದಾಸ್ಯದಲ್ಲಿ ಕಳೆಯಬೇಕೆಂಬುದು ಇಸ್ಲಾಮಿನ ಆರಾಧನಾ ಕಲ್ಪನೆಯಾಗಿದೆ. ನೀವು ನಿಮ್ಮನ್ನು ಪೂರ್ಣಾವಧಿ ಮತ್ತು ಶಾಶ್ವತ ಸೇವಕನೆಂದು ಭಾವಿಸಬೇಕು. ನಿಮ್ಮ ಜೀವನದ ಒಂದು ನಿಮಿಷವೂ ದೇವನ ಆರಾಧನೆಯಿಂದ ಮುಕ್ತವಾಗಿರಬಾರದು. ಈ ಲೋಕದಲ್ಲಿ ನೀವು ಮಾಡುವ ಪ್ರತಿಯೊಂದು ಕೆಲಸವೂ ದೇವನ ನೈತಿಕ ನಿಯಮಗಳಿಗೆ ಅನುಗುಣವಾಗಿರಬೇಕು. ನಿಮ್ಮ ನಿದ್ರೆ-ಜಾಗರಣೆ, ಅಶನ-ವಸನ, ನಡೆ-ನುಡಿ ಎಲ್ಲವೂ ದೇವನ ನೈತಿಕ ನಿಯಮ*.ಗಳಿಗೆ ಬದ್ಧವಾಗಿರಬೇಕು. ಅಲ್ಲಾಹನು ಯಾವ

---

** ಆಧುನಿಕ ಕಾಲದಲ್ಲಿ ಮಹಾಶಯರೊಬ್ಬರು ನೈತಿಕ ನಿಯಮ ಮತ್ತು ನೈಸರ್ಗಿಕ ನಿಯಮದ*

ರೀತಿಯ ಸಂಬಂಧಗಳಲ್ಲಿ ನಿಮ್ಮನ್ನು ಬೆಸೆದಿದ್ದಾನೋ ಅದರಲ್ಲಿ ನೀವು ಬೆಸೆಯಲ್ಪಡಬೇಕು. ಅದನ್ನು ಯಾವ ರೀತಿ ಬೆಸೆಯುವ ಮತ್ತು ಮುರಿಯುವ ಆದೇಶವನ್ನು ಅಲ್ಲಾಹನು ನೀಡಿದ್ದಾನೋ ಅದೇ ರೀತಿಯಲ್ಲಿ ಅದನ್ನು ಬೆಸೆಯಬೇಕು ಮತ್ತು ಮುರಿಯಬೇಕು. ದೇವನು ಯಾವ ಸೇವೆಗಳನ್ನು ನಿಮಗೊಪ್ಪಿಸಿದ್ದಾನೋ ಮತ್ತು ಲೌಕಿಕ ಜೀವನದಲ್ಲಿ ಯಾವ ಹೊಣೆಗಾರಿಕೆಗಳನ್ನು ನಿಮಗೆ ವಹಿಸಿ ಕೊಟ್ಟಿದ್ದಾನೋ ಅದನ್ನು ಮನಸ್ಸಿನ ಪೂರ್ಣ ಸನ್ನದ್ಧತೆಯೊಂದಿಗೆ ನಿಭಾಯಿಸಬೇಕು. ದೇವನು ತನ್ನ ಪ್ರವಾದಿಗಳ ಮೂಲಕ ನಿಮಗೆ ಯಾವ ಮಾರ್ಗದರ್ಶನವನ್ನು ನೀಡಿದ್ದಾನೋ ಅದರಂತೆ ನೀವದನ್ನು ಪರಿಪಾಲಿಸಬೇಕು. ಪ್ರತಿಯೊಂದು ಕೆಲಸವನ್ನು ಮಾಡುವಾಗಲೂ ಎಲ್ಲ ಸಂದರ್ಭದಲ್ಲೂ ನೀವು ದೇವನ ಮುಂದೆ ನಿಮಗಿರುವ ಹೊಣೆಗಾರಿಕೆಗಳನ್ನು ಅರಿಯಬೇಕು. ಪ್ರತಿಯೊಂದು ಚಲನವಲನಕ್ಕೂ ನೀವು ವಿಚಾರಣೆ ಎದುರಿಸಬೇಕಾಗಿದೆ ಎಂಬುದರ ಪರಿಜ್ಞಾನ ನಿಮಗಿರಬೇಕು. ಮನೆಯಲ್ಲಿ ಪತ್ನಿ-ಮಕ್ಕಳ ಜತೆಗೆ, ವಠಾರದಲ್ಲಿ ನಿಮ್ಮ ಒಡನಾಡಿಗಳ ಜತೆಗೆ, ಸಮಾಜದಲ್ಲಿ ಸಂಗಾತಿಗಳ ಜತೆಗೆ, ವ್ಯಾಪಾರ-ವಹಿವಾಟಿನ ವೇಳೆ ಅನ್ಯರ ಜತೆಗೆ- ಹೀಗೆ ಎಲ್ಲರೊಂದಿಗೆ ವ್ಯವಹರಿಸುವಾಗಲೂ ಪ್ರತಿ ಸಲ,

---

*ನಡುವಿನ ವ್ಯತ್ಯಾಸವನ್ನು ಕಡೆಗಣಿಸಿ ಪಥಭ್ರಷ್ಟತೆಯ ಮಹಾ ಕ್ಷೋಭೆಯನ್ನೇ ಎಬ್ಬಿಸಿದ್ದಾರೆ. ಅವರ ಪ್ರಕಾರ ದೇವನ ಆರಾಧನೆಯೆಂದರೆ ನೈಸರ್ಗಿಕ ನಿಯಮಗಳ ಪಾಲನೆ ಮಾತ್ರವಾಗಿದೆ. ಅದು ನೈತಿಕ ನಿಯಮಗಳಿಗೆ ಬದ್ಧವಾಗಿದೆಯೋ, ಇಲ್ಲವೋ ಎಂದು ಪರಿಗಣಿಸಬೇಕಾಗಿಲ್ಲ- ನೈಸರ್ಗಿಕ ನಿಯಮಗಳ ಪ್ರಕಾರ ಸಂಘಟನೆಯನ್ನು ರೂಪಿಸುವ ಮತ್ತು ವೈಜ್ಞಾನಿಕ ಸಂಶೋಧನೆಗಳನ್ನು ನಡೆಸುವ ಮೂಲಕ ಶಕ್ತಿ ಕುದುರಿಸುವವರನ್ನೂ ಅವರು ದೇವನ ಸಚ್ಚರಿತ ದಾಸರ, ದೇವನ ಪ್ರತಿನಿಧಿಗಳ ಮತ್ತು ಸತ್ಯಸಂಧರಾದ ಸತ್ಯವಿಶ್ವಾಸಿಗಳ ಸಾಲಿನಲ್ಲಿ ನಿಲ್ಲಿಸುತ್ತಾರೆ, ಅವರು ಈ ಶಕ್ತಿಯ ಉಪಯೋಗದಲ್ಲಿ ದೇವನ ನೈತಿಕ ನಿಯಮಗಳನ್ನು ಪಾಲಿಸದಿದ್ದರೂ ಸರಿಯೇ. ಇದು ಎಷ್ಟು ಘೋರವಾದ ತಪ್ಪೆಂದರೆ ಅದು ಸತ್ಯನಿಷೇಧವನ್ನು ಆಜ್ಞಾನುಸರಣೆಯೆಂದು, ಬಂಡಾಯವನ್ನು ದಾಸ್ಯೋಪಾಸನೆಯೆಂದು ಮತ್ತು ಪಾಪ ಕೃತ್ಯಗಳನ್ನು ಅನುಸರಣಶೀಲತೆಯೆಂದು ಪರಿಗಣಿಸುತ್ತದೆ. ಈ ವಿಭಾವನೆ ಇಸ್ಲಾಮಿ ಚಟುವಟಿಕೆಗಳ ನೈಜ ಸ್ಫೂರ್ತಿಯನ್ನೇ ವಿಕೃತಗೊಳಿಸಿದೆ. ವ್ಯಕ್ತಿಗೆ ನೈಸರ್ಗಿಕ ನಿಯಮಗಳಿಂದ ದೇವನ ನೈತಿಕ ನಿಯಮಗಳಿಗೆ ಬದ್ಧವಾಗಿ ಪ್ರಯೋಜನ ಪಡೆಯುವ ಬೋಧನೆ ನೀಡುವುದು ಇಸ್ಲಾಮಿನ ಆಗಮನೋದ್ದೇಶವಾಗಿದೆ ಎಂದು ಆ ವ್ಯಕ್ತಿಗೆ ತಿಳಿದಿಲ್ಲ. ಮಾನವನ ಕೆಲಸ ನೈಸರ್ಗಿಕ ನಿಯಮಗಳ ಪಾಲನೆ ಮಾತ್ರವಾಗಿದ್ದರೆ ಅದರ ಬೋಧನೆ ನೀಡಲು ಯಾವುದೇ ಪ್ರವಾದಿಯ ಅಥವಾ ಗ್ರಂಥದ ಆಗಮನದ ಅವಶ್ಯಕತೆ ಇರಲಿಲ್ಲ. ಅದಕ್ಕೆ ಸುಪ್ತವಾದ ಜೈವಿಕ ಗುಣಗಳೇ ಸಾಕಾಗುತ್ತಿತ್ತು. ನೈಸರ್ಗಿಕ ನಿಯಮಗಳ ಪಾಲನೆ ಮಾತ್ರವೇ ಮಾನವನ ಕರ್ತವ್ಯವಾಗಿದ್ದರೆ ಅವನ ಮತ್ತು ಪ್ರಾಣಿಯ ನಡುವೆ ಯಾವುದೇ ವ್ಯತ್ಯಾಸವಿರಲು ಸಾಧ್ಯವಿರಲಿಲ್ಲ. ತೋಳ ಕುರಿಯನ್ನು ಹರಿದು ತಿನ್ನುವುದು ಅದರ ಪಾಲಿಗೆ ನೈಸರ್ಗಿಕ ನಿಯಮವಾಗಿದೆ. ಹಾಗೆಯೇ ಬಲಶಾಲಿಯಾದ ವ್ಯಕ್ತಿ ದುರ್ಬಲನನ್ನು ಹರಿದು ತಿನ್ನುವುದು ಅವನ ಪಾಲಿಗೂ ನೈಸರ್ಗಿಕ ನಿಯಮವೇ ಆಗಿದೆ. ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರಕ್ಕಿಂತ ಹೆಚ್ಚು ಸಮರ್ಥವಾಗಿ ವಿಮಾನ ಮತ್ತು ಬಾಂಬುಗಳನ್ನು ರೂಪಿಸಬಲ್ಲುದು ಮತ್ತು ಈ ಶಕ್ತಿಯಿಂದ ಅದು ಇತರ ರಾಷ್ಟ್ರಗಳನ್ನು ಮಣಿಸಬಲ್ಲುದು ಎಂದಾದರೆ, ಅದರ ಪಾಲಿಗೆ ಅದು ನೈಸರ್ಗಿಕ ನಿಯಮದ ಪಾಲನೆಯಾಗಿದೆ. ಈ ಸಿದ್ಧಾಂತ, ವ್ಯಕ್ತಿಯನ್ನು ಮಾನವೀಯತೆಯ ಮಟ್ಟದಿಂದ ಕೆಳಗಿಳಿಸಿ ಪ್ರಾಣಿಗಳ ಮತ್ತು ವಿಷಜಂತುಗಳ ಸಾಲಿನಲ್ಲಿ ತಂದು ನಿಲ್ಲಿಸುತ್ತದೆ. ಈ ದಾನವೀಯತೆಯನ್ನು ದಾಸ್ಯೋಪಾಸನೆಯೆಂದು ಬಗೆಯುವುದು ಇಸ್ಲಾಮಿಗೆ ಅಪರಿಚಿತವಾದ ಕಲ್ಪನೆಯಾಗಿದೆ.*

ಪ್ರತಿಯೊಂದು ಕೆಲಸದ ವೇಳೆ ನೀವು ದೇವನು ನೇಮಿಸಿರುವ ಮಿತಿಗಳನ್ನು ಪಾಲಿಸಬೇಕು. ರಾತ್ರಿಯ ಕಾರ್ಗತ್ತಲಿನಲ್ಲಿ ನೀವು ಏಕಾಂತದಲ್ಲಿರುವಾಗ ನಿಮ್ಮನ್ನು ಯಾರೂ ನೋಡಲಾಗದ ಸ್ಥಿತಿಯಲ್ಲಿ ದೇವ-ಧಿಕ್ಕಾರದ ಯಾವುದೇ ಕೆಲಸವನ್ನು ನಿಮಗೆ ಮಾಡಲು ಸಾಧ್ಯವಿದ್ದರೆ, ದೇವನು ನಮ್ಮನ್ನು ನೋಡುತ್ತಿದ್ದಾನೆ ಎಂಬುದರ ಅರಿವು ನಿಮಗಿರಬೇಕು. ನೀವು ಕಾಡಿನಲ್ಲಿ ಸಾಗುತ್ತಿರುವ ವೇಳೆ, ನೋಡುವವರು ಮತ್ತು ಸಾಕ್ಷ್ಯ ನೀಡುವವರು ಯಾರೂ ಇಲ್ಲದಂತಹ ಸ್ಥಿತಿಯಲ್ಲಿ ನಿಮಗೆ ಯಾವುದೇ ಅಪರಾಧವನ್ನು ಮಾಡಲು ಸಾಧ್ಯವಿದ್ದರೆ ಆಗಲೂ ನೀವು ದೇವನನ್ನು ನೆನಪಿಸಿ ಅವನ ಬಗ್ಗೆ ಭಯ ಪಡಬೇಕು. ಅಪರಾಧದಿಂದ ದೂರ ನಿಲ್ಲಬೇಕು. ಸುಳ್ಳು, ಅವಿಶ್ವಾಸ ಮತ್ತು ದಬ್ಬಾಳಿಕೆಯಿಂದ ನಿಮಗೆ ವಿಪುಲ ಲಾಭ ಸಿಗುವುದಾದರೆ ಮತ್ತು ಯಾರೂ ನಿಮ್ಮನ್ನು ಅದರಿಂದ ತಡೆಯುವವರಿಲ್ಲದಿದ್ದರೆ, ಆಗಲೂ ನೀವು ದೇವನನ್ನು ಭಯ ಪಡಬೇಕು. ದೇವನ ಕ್ರೋಧಕ್ಕೆ ಈಡು ಮಾಡುವ ಆ ಲಾಭದಿಂದ ದೂರ ನಿಲ್ಲಬೇಕು. ಸತ್ಯ ಸಂಧತೆ ಮತ್ತು ಪ್ರಾಮಾಣಿಕತೆಯಿಂದ ನಿಮಗೆ ನಿರಂತರ ನಷ್ಟವಾಗುತ್ತಿದ್ದರೂ ದೇವನ ಸಂಪ್ರೀತಿಗಳಿಸುವ ಏಕ ಮಾತ್ರ ಉದ್ದೇಶದಿಂದ ಆ ನಷ್ಟವನ್ನು ನೆಚ್ಚಿಕೊಳ್ಳಬೇಕು.

ಲೋಕವನ್ನು ತೊರೆದು ಮೂಲೆ ಸೇರುವುದು, ಏಕಾಂತತೆಯಲ್ಲಿ ಕುಳಿತು ಜಪ-ತಪಗಳಲ್ಲಿ ನಿರತನಾಗುವುದು ಆರಾಧನೆಯಲ್ಲ. ಲೋಕದ ವಹಿವಾಟುಗಳಲ್ಲಿರುತ್ತಾ, ಲೌಕಿಕ ಜೀವನದ ಹೊಣೆಗಾರಿಕೆಗಳೆಲ್ಲವನ್ನೂ ನಿಭಾಯಿಸುತ್ತಾ, ದೇವನ ಕಾನೂನುಗಳನ್ನು ಪಾಲಿಸುವುದು ಆರಾಧನೆಯಾಗಿದೆ. ನಾಲಿಗೆಯ ಮೂಲಕ ಸದಾ ದೇವನಾಮವನ್ನು ಜಪಿಸುತ್ತಿರುವುದು ದೇವ ಸ್ಮರಣೆಯಲ್ಲ. ದೇವ ವಿಸ್ಮರಣೆಗೆ ಈಡು ಮಾಡುವಂತಹ ಕೆಲಸಗಳಲ್ಲಿ ನಿರತನಾಗಿರುವ ವೇಳೆಯೂ ದೇವನಿಂದ ವಿಮುಖನಾಗದಿರುವುದು ನಿಜವಾಗಿ ದೇವಸ್ಮರಣೆಯಾಗಿದೆ. ಲೌಕಿಕ ಜೀವನದಲ್ಲಿ ದೇವನ ಕಾನೂನುಗಳನ್ನು ಮುರಿಯುವಂತಹ ಅನೇಕ ಅವಕಾಶಗಳು, ಮಹಾ ನಷ್ಟದ ಭಯವನ್ನು ಹುಟ್ಟಿಸುತ್ತಾ ಆಸನ್ನವಾಗುತ್ತದೆ. ಅಂತಹ ಎಲ್ಲ ಸಂದರ್ಭಗಳಲ್ಲಿ ನೀವು ದೇವನನ್ನು ಭಯಪಟ್ಟು ಅವನ ಕಾನೂನುಗಳನ್ನು ಅನುಸರಿಸಬೇಕಾಗಿದೆ. ಅಧಿಕಾರದ ಗಾದಿಯ ಮೇಲೆ ಕುಳಿತಾಗಲೂ ನಾನು ಜನರ ಒಡೆಯನಲ್ಲ ಬದಲಾಗಿ ಒಡೆಯನ ದಾಸ ಎಂಬುದು ನಿಮಗೆ ನೆನಪಿರಬೇಕು. ನ್ಯಾಯಾಧೀಶನ ಸ್ಥಾನದಲ್ಲಿ ಅಲಂಕೃತವಾಗಿದ್ದಾಗ, ಅಲ್ಲಿ ಘೋಷಣೆ ಮಾಡುವ ಪೂರ್ಣಾಧಿಕಾರವಿದ್ದಾಗಲೂ ನಾನು ದೇವನ ವತಿಯಿಂದ ನ್ಯಾಯ ಪರಿಪಾಲನೆಗಾಗಿ ನೇಮಿಸಲ್ಪಟ್ಟಿದ್ದೇನೆ ಎಂಬುದರ ಪರಿಜ್ಞಾನ ನಿಮಗಿರಬೇಕು. ಭೂಮಿಯ ಖಜಾನೆಗಳು ನಿಮ್ಮ ನಿಯಂತ್ರಣದಲ್ಲಿದ್ದಾಗಲೂ ನಾನು ಈ ಖಜಾನೆಯ ಮಾಲಕನಲ್ಲ, ಬದಲಾಗಿ ಸಂರಕ್ಷಕ ಮಾತ್ರ, ಅದರ ಪ್ರತಿಯೊಂದು ಪೈಸೆಯ ಬಗ್ಗೆಯೂ ನಾನು ನೈಜ ಒಡೆಯನಿಗೆ ಲೆಕ್ಕ ಸಮರ್ಪಣೆ ಮಾಡಬೇಕಾಗಿದೆ ಎಂಬುದು ನಿಮಗೆ ನೆನಪಿರಬೇಕು. ಸೇನಾ ದಂಡನಾಯಕನಾಗಿದ್ದರೂ ದೇವಭಯ ನಿಮ್ಮನ್ನು ಅಧಿಕಾರದ ಮತ್ತಿನಲ್ಲಿ ಮೈ ಮರೆಯುವುದರಿಂದ ದೂರ ಉಳಿಸಬೇಕು. ರಾಜಕೀಯ ಮತ್ತು ಲೋಕೋದ್ಧಾರದ ಕಠಿಣ ಕೆಲಸವನ್ನು ಕೈಗೆತ್ತಿಕೊಂಡಾಗಲೂ ಸತ್ಯ ಸಂಧತೆ, ನ್ಯಾಯ, ಸತ್ಯಪ್ರಿಯತೆಯ ಶಾಶ್ವತ ಮೌಲ್ಯಗಳನ್ನು ನೆಚ್ಚಿಕೊಂಡು ಕಾರ್ಯತತ್ಪರನಾಗಿರಬೇಕು. ವ್ಯಾಪಾರ, ಹಣಕಾಸು ಮತ್ತು ಉದ್ಯಮದ ನಿಯಂತ್ರಣ ಮಾಡುವಾಗಲೂ ಯಶಸ್ಸಿನ

ಮೂಲಗಳಲ್ಲಿ ಸಮ್ಮತಾಸಮ್ಮತಗಳ ವ್ಯತ್ಯಾಸವನ್ನು ಪರಿಗಣಿಸುತ್ತಾ ಮುಂದೆ ಸಾಗಬೇಕು. ಹೆಜ್ಜೆ ಹೆಜ್ಜೆಗೂ ಅಸಮ್ಮತವಾದ ಕಾರ್ಯ ತನ್ನ ಅತೀವ ಆಕರ್ಷಣೆಯೊಂದಿಗೆ ಪ್ರತ್ಯಕ್ಷವಾದಾಗಲೂ ನಿಮ್ಮ ಪಾದಗಳು ವ್ಯತಿ ಚಲಿಸಬಾರದು. ಶೋಷಣೆ, ಸುಳ್ಳು, ಮೋಸ ಮತ್ತು ಕೆಡುಕು ನಾಲ್ಕೂ ನಿಟ್ಟಿನಲ್ಲಿ ರಾರಾಜಿಸುತ್ತಿದ್ದಾಗಲೂ, ಲೌಕಿಕ ಯಶಸ್ಸು ಮತ್ತು ಭೌತಿಕ ಸುಖ ಲೋಲುಪತೆಗಳು ಇಕ್ಕೆಲಗಳಲ್ಲಿ ಕಂಗೊಳಿಸುತ್ತಿದ್ದಾಗಲೂ, ದೇವಸ್ಮರಣೆ ಮತ್ತು ಪರಲೋಕದ ವಿಚಾರಣೆ ನಿಮ್ಮ ಪಾಲಿಗೆ ನಿರ್ಬಂಧಗಳನ್ನೊಡ್ಡಬೇಕು. ದೇವನ ಮೇರೆಗಳ ಪೈಕಿ ಒಂದೊಂದು ಮೇರೆಯನ್ನು ಪಾಲಿಸುವುದರಲ್ಲಿ ಸಾವಿರಾರು ತೊಂದರೆಗಳು ನಿಮಗೆ ಗೋಚರಿಸಿದರೂ, ನ್ಯಾಯ ಮತ್ತು ಸತ್ಯದಲ್ಲಿ ನೆಲೆ ನಿಲ್ಲುವುದರಲ್ಲಿ ಪ್ರಾಣ ಮತ್ತು ಸೊತ್ತಿನ ಅಪಾಯ ಕಂಡು ಬಂದರೂ, ದೇವ ನಿಯಮಗಳನ್ನು ಪಾಲಿಸುವುದರಲ್ಲಿ ಎಲ್ಲರ ಶತ್ರುತ್ವ ಕಟ್ಟಿಕೊಳ್ಳಬೇಕಾಗಿದ್ದರೂ ನೀವು ನಿಮ್ಮ ಸಂಕಲ್ಪದಿಂದ ಕಿಂಚಿತ್ತೂ ಕದಲಬಾರದು. ನಿಮ್ಮ ದೃಢ ನಿರ್ಧಾರಕ್ಕೆ ಯಾವುದೇ ರೀತಿಯ ಭಂಗ ಉಂಟಾಗಬಾರದು. ಇದುವೇ ನೈಜ ದಾಸ್ಯೋಪಾಸನೆ. ಅದನ್ನೇ ದೇವಸ್ಮರಣೆ ಮತ್ತು ದೇವಧ್ಯಾನ ಎನ್ನಲಾಗುತ್ತದೆ. ಈ ದೇವಸ್ಮರಣೆಯನ್ನು ಪ್ರಸ್ತಾವಿಸುತ್ತಾ ಪವಿತ್ರ ಕುರ್‌ಆನ್ ಹೀಗೆ ಸೂಚಿಸುತ್ತದೆ,

فَإِذَا قُضِيَتِ الصَّلَاةُ فَانْتَشِرُوا فِي الْأَرْضِ وَابْتَغُوا مِنْ فَضْلِ اللَّهِ
وَاذْكُرُوا اللَّهَ كَثِيرًا لَعَلَّكُمْ تُفْلِحُونَ ۔

"ನಮಾಝ್ ಮುಗಿದ ಬಳಿಕ ಭೂಮಿಯ ಮೇಲೆ ಚದುರಿ ಬಿಡಿರಿ ಮತ್ತು ಅಲ್ಲಾಹನ ಅನುಗ್ರಹವನ್ನರಸಿರಿ. ಅಲ್ಲಾಹನನ್ನು ಅತ್ಯಧಿಕ ಸ್ಮರಿಸುತ್ತಲಿರಿ. ನಿಮಗೆ ಯಶಸ್ಸು ಪ್ರಾಪ್ತವಾಗಲೂ ಬಹುದು."

(ಅಲ್ ಜುಮುಅಃ : 10)

## ಆಧ್ಯಾತ್ಮಿಕ ಪ್ರಗತಿ ಮತ್ತು ದಿವ್ಯ ದೀಕ್ಷೆಯ ಮಾರ್ಗ

ಇಸ್ಲಾಮ್ ಆಧ್ಯಾತ್ಮಿಕ ಪ್ರಗತಿ ಮತ್ತು ದಿವ್ಯ ದೀಕ್ಷೆಯ ಪ್ರಾಪ್ತಿಗೂ ಈ ಮಾರ್ಗವನ್ನೇ ಸೂಚಿಸಿದೆ. ದೇವನನ್ನು ಮಾನವನು ವನ, ಪರ್ವತ ಮತ್ತು ಏಕಾಂತ ವಾಸದಲ್ಲಿ ಕಾಣಲು ಸಾಧ್ಯವಿಲ್ಲ. ಮಾನವರ ನಡುವೆ ಮತ್ತು ಜೀವನದ ಜಂಜಡಗಳ ನಡುವೆಯೇ ಅವನು ದೇವನನ್ನು ಕಾಣುತ್ತಾನೆ. ಸ್ವತಃ ತನ್ನ ಕಣ್ಣಿನಿಂದಲೇ ದೇವನನ್ನು ನೋಡುತ್ತಿರುವಂತೆ ಅವನು ದೇವನನ್ನು ಕಂಡುಕೊಳ್ಳುತ್ತಾನೆ. ನಿಷಿದ್ಧ ಕಾರ್ಯಗಳಿಂದುಂಟಾಗುವ ಲಾಭ, ಅಕ್ರಮದ ಅವಕಾಶ ಮತ್ತು ಕೆಡುಕುಗಳ ಮಾರ್ಗ ಹೆಜ್ಜೆ ಹೆಜ್ಜೆಗೆ ತೆರೆದುಕೊಂಡಿದ್ದಾಗಲೂ ಎಲ್ಲ ಸಂದರ್ಭಗಳಲ್ಲಿ ದೇವನ ಬಗ್ಗೆ ಭಯಪಟ್ಟು ಅವನು ಅದರಿಂದ ತನ್ನನ್ನು ರಕ್ಷಿಸುತ್ತಾ ಮುಂದೆ ಸಾಗಿದರೆ ಅವನಿಗೆ ದಿವ್ಯ ದೀಕ್ಷೆ ಪ್ರಾಪ್ತವಾಗುತ್ತದೆ. ಹೆಜ್ಜೆ ಹೆಜ್ಜೆಗೂ ಅವನು ದೇವನನ್ನು ಪಡೆಯುತ್ತಾನೆ ಮಾತ್ರವಲ್ಲ, ಬರಿಗಣ್ಣಿನಿಂದಲೇ ದಿವ್ಯದರ್ಶನದ ಅನುಭವ ಪಡೆಯುತ್ತಾನೆ. ಅವನು ದೇವನನ್ನು ಪಡೆಯುತ್ತಿಲ್ಲ, ಕಾಣುತ್ತಿಲ್ಲವೆಂದಾದರೆ ಈ ದುರ್ಗಮ ಹಾದಿಯಿಂದ ಕ್ಷೇಮವಾಗಿ ಹೊರಬರಲು ಅವನಿಗೆ ಸಾಧ್ಯವಾಗುತ್ತಿತ್ತೇ? ಮನೆಯ ಮನರಂಜನೆಯ

ವೇಳೆಯಲ್ಲೂ, ವ್ಯಾಪಾರ ವಹಿವಾಟುಗಳಲ್ಲಿ ತಲ್ಲೀನವಾಗಿರುವ ಹೊತ್ತಿನಲ್ಲೂ ಯಾರು ಎಲ್ಲ ಕೆಲಸವನ್ನೂ ದೇವನು ತನ್ನಿಂದ ದೂರವಿಲ್ಲವೆಂಬ ಪರಿಜ್ಞಾನದೊಂದಿಗೆ ಮಾಡುತ್ತಾರೋ ಅವರು ಪ್ರತಿ ಕ್ಷಣದಲ್ಲಿ ದೇವಸಾನಿಧ್ಯದ ಅನುಭವ ಪಡೆಯುತ್ತಾರೆ. ಒಬ್ಬನು ಸರ್ಕಾರ, ಯುದ್ಧ ಸಂಧಾನ, ಹಣಕಾಸು ವ್ಯವಹಾರ, ಉದ್ಯಮ, ವ್ಯಾಪಾರ ಮುಂತಾದ ವಿಶ್ವಾಸವನ್ನು ಕಠಿಣ ಪರೀಕ್ಷೆಗೊಡ್ಡುವ ಕೆಲಸಗಳನ್ನು ಮಾಡುತ್ತಾನೆ ಮತ್ತು ಆ ಎಲ್ಲ ಸಂದರ್ಭಗಳಲ್ಲಿ ಪ್ರಗತಿಯ ಪೈಶಾಚಿಕ ಮಾರ್ಗಗಳಿಂದ ದೂರವಿದ್ದು ದೇವನ ಮೇರೆಗಳಿಗೆ ಬದ್ಧನಾಗಿರುತ್ತಾನೆಂದಾದರೆ, ಅವನಿಗಿಂತ ಮಿಗಿಲಾದ ನೈಜ ಮತ್ತು ದೃಢವಿಶ್ವಾಸ ಯಾರಿಗಿರಲು ಸಾಧ್ಯ? ಅವನಿಗಿಂತ ಹೆಚ್ಚು ದಿವ್ಯ ದೀಕ್ಷೆ ಪಡೆಯುವವರು ಬೇರಾರಿದ್ದಾರೆ? ಅವನಿಗಿಂತ ಹೆಚ್ಚು ದೇವನ ನಿಕಟ ಮಿತ್ರ ಮತ್ತು ಆಪ್ತದಾಸನಾಗಲು ಯಾರಿಗೆ ಸಾಧ್ಯ?

ಇಸ್ಲಾಮಿ ದೃಷ್ಟಿಕೋನದಂತೆ ಮಾನವನ ಆಧ್ಯಾತ್ಮಿಕ ಶಕ್ತಿಗಳ ಪುರೋಭಿವೃದ್ಧಿಯ ಮಾರ್ಗ ಇದುವೇ ಆಗಿದೆ. ಕುಸ್ತಿಪಟುವಿನಂತೆ ಆಸನಗಳನ್ನು ನಡೆಸಿ ತನ್ನ ಮನೋದಾರ್ಢ್ಯವನ್ನು ಹೆಚ್ಚಿಸಿಕೊಳ್ಳುವುದು ಮತ್ತು ಅದರ ಆಧಾರದಲ್ಲಿ ಜ್ಞಾನೋದಯ ಮತ್ತು ಚಮತ್ಕಾರದ ಕಸರತ್ತುಗಳನ್ನು ಪ್ರದರ್ಶಿಸುವುದರ ಹೆಸರು ಆಧ್ಯಾತ್ಮಿಕ ಪ್ರಗತಿಯಲ್ಲ. ಮನಸೇಚ್ಛೆಗಳನ್ನು ನಿಯಂತ್ರಿಸುವುದು, ಮೆದುಳು ಮತ್ತು ದೇಹದ ಶಕ್ತಿಗಳಿಂದ ಸರಿಯಾದ ಪ್ರಯೋಜನ ಪಡೆಯುವುದು, ತನ್ನ ಚಾರಿತ್ರ್ಯವನ್ನು ದಿವ್ಯಚಾರಿತ್ರ್ಯಕ್ಕೆ ಸಮೀಪ ಗೊಳಿಸುವುದು ನಿಜವಾಗಿ ಆಧ್ಯಾತ್ಮಿಕ ಪ್ರಗತಿಯಾಗಿದೆ. ಲೌಕಿಕ ಜೀವನದಲ್ಲಿ ಹಂತ-ಹಂತದಲ್ಲಿ ಪರೀಕ್ಷೆಯ ಘಟ್ಟ ಎದುರಾಗುವಾಗ, ಪೈಶಾಚಿಕ ಮತ್ತು ಮೃಗೀಯ ಕಾರ್ಯನೀತಿಯಿಂದ ದೂರವಿರುತ್ತಾ, ಪೂರ್ಣ ಪರಿಜ್ಞಾನದೊಂದಿಗೆ ಮಾನವೀಯತೆಗೆ ತಕ್ಕುದಾದ ವಿಧಾನಕ್ಕೆ ಅಂಟಿಕೊಂಡಿದ್ದರೆ, ನಿಮ್ಮಲ್ಲಿರುವ ಮಾನವೀಯತೆ ದಿನೇ ದಿನೇ ವೃದ್ಧಿಯಾಗುತ್ತದೆ. ನೀವು ಅನುದಿನವೂ ದೇವನಿಗೆ ಹತ್ತಿರರಾಗುತ್ತೀರಿ. ಇದರ ಹೊರತು 'ಆಧ್ಯಾತ್ಮಿಕ ಪ್ರಗತಿ' ಬೇರೇನೂ ಅಲ್ಲ.*

---

** ಅನೇಕರು 'ಆಧ್ಯಾತ್ಮಿಕ ಪ್ರಗತಿ'ಯ ಬಗ್ಗೆ ಮಾತನಾಡುತ್ತಾರೆ. ಆದರೆ 'ಆಧ್ಯಾತ್ಮಿಕತೆ' ಎಂದರೇನೆಂದು ಅವರಿಗೆ ತಿಳಿದಿರುವುದಿಲ್ಲ. ಆದ್ದರಿಂದ ಜೀವನ ಪರ್ಯಂತ ಅವರು ಅಸ್ಪಷ್ಟ ವಸ್ತುವೊಂದರ ಹುಡುಕಾಟ ಮತ್ತು ಅದರ ಪ್ರಾಪ್ತಿಯ ಪ್ರಯತ್ನದಲ್ಲಿ ನಿರತರಾಗಿರುತ್ತಾರೆ. ತಮ್ಮೆಲ್ಲಾ ಪ್ರಯತ್ನಗಳ ಹೊರತಾಗಿಯೂ ನಾವು ಎಲ್ಲಿ ತಲುಪಬೇಕಾಗಿತ್ತು ಮತ್ತು ಎಲ್ಲಿಗೆ ತಲಪಿದ್ದೇವೆ ಎಂಬ ಬಗ್ಗೆ ಅವರು ಅಜ್ಞರಾಗಿರುತ್ತಾರೆ. ನಿಜವಾಗಿ 'ಆಧ್ಯಾತ್ಮಿಕ' ಎಂಬ ಪದವನ್ನೇ ಗಮನಿಸಿದರೆ ವಿಷಯ ವ್ಯಕ್ತವಾಗುತ್ತದೆ. 'ಆಧ್ಯಾತ್ಮಿಕ' ಎಂಬ ಪದದಲ್ಲಿ 'ಆತ್ಮ' ಎಂದರೆ ಮಾನವನ 'ಆತ್ಮ'ವಲ್ಲದೆ ಬೇರೇನೂ ಅಲ್ಲ. 'ಆಧ್ಯಾತ್ಮಿಕತೆ' ಮಾನವೀಯತೆಗೆ ಇರುವ ಇನ್ನೊಂದು ಪದವಾಗಿದೆ. ಮಾನವ ತನ್ನ ಮೃಗೀಯ ಸ್ವೇಚ್ಛೆಗಳ ದಾಸ್ಯದಿಂದ ಹೊರಬಂದು ಸಮಗ್ರ ಮಾನವೀಯತೆಯ ಕಡೆಗೆ ಎಷ್ಟು ಮುಂದೆ ಸಾಗುವನೋ, ಚಾರಿತ್ರ್ಯ ಮತ್ತು ಮಾನವೀಯ ಗುಣಗಳಿಂದ ಸಂಪನ್ನನಾಗಿ ದೇವ ಸಂಪ್ರೀತಿಯ ಉನ್ನತ ಧ್ಯೇಯದೆಡೆಗೆ ತಲಪಲು ಅವನು ಎಷ್ಟು ಯಶಸ್ವೀ ಪ್ರಯತ್ನ ನಡೆಸುವನೋ ಅಷ್ಟೇ ಆಧ್ಯಾತ್ಮಿಕ ಪ್ರಗತಿಯನ್ನು ಅವನು ತನ್ನದಾಗಿಸಿಕೊಳ್ಳುವನು.*

## ಇಸ್ಲಾಮಿನಲ್ಲಿ ಆರಾಧನಾ ಕರ್ಮಗಳಿಗಿರುವ ಸ್ಥಾನಮಾನ

ಇದು ಇಸ್ಲಾಮಿನಲ್ಲಿ 'ದಾಸ್ಯೋಪಾಸನೆ'ಗೆ ಇರುವ ತಾತ್ಪರ್ಯ. ಇಸ್ಲಾಮ್ ಮಾನವನ ಸಮಸ್ತ ಜೀವನವನ್ನು 'ದಾಸ್ಯೋಪಾಸನೆ'ಯನ್ನಾಗಿ ಮಾಡಬಯಸುತ್ತದೆ. ವ್ಯಕ್ತಿಯ ಜೀವನದ ಯಾವ ಕ್ಷಣವೂ ದೇವನ ದಾಸ್ಯೋಪಾಸನೆಯಿಂದ ಮುಕ್ತವಾಗಿರಬಾರದೆಂದು ಅದು ಬಯಸುತ್ತದೆ.

لا إله إلا الله (ಲಾ ಇಲಾಹ ಇಲ್ಲಲ್ಲಾಃ) 'ಅಲ್ಲಾಹನಲ್ಲದೆ ಆರಾಧ್ಯನಿಲ್ಲ' ಎಂದು ಘೋಷಿಸುವುದರೊಂದಿಗೆ, ಯಾವ ಅಲ್ಲಾಹನನ್ನು ಅವನು ಆರಾಧ್ಯನೆಂದು ಪರಿಗಣಿಸಿದ್ದಾನೋ ಅವನ ದಾಸ್ಯ ಸ್ವೀಕರಿಸುವುದು ಅವನ ಪಾಲಿಗೆ ಕಡ್ಡಾಯವಾಗುತ್ತದೆ. ಹೀಗೆ ದಾಸ್ಯ ಸ್ವೀಕರಿಸುವುದರ ಹೆಸರೇ ಆರಾಧನೆ ಅಥವಾ ದಾಸ್ಯೋಪಾಸನೆ. ಹೇಳಲಿಕ್ಕೆ ಇದೊಂದು ಸಣ್ಣ ಮಾತು, ಸುಲಭವಾಗಿ ಇದನ್ನು ನಾಲಗೆಯ ಮೂಲಕ ಉಚ್ಚರಿಸಬಹುದು, ಆದರೆ ಪ್ರಾಯೋಗಿಕವಾಗಿ ಮಾನವ ತನ್ನ ಸಮಸ್ತ ಜೀವನವನ್ನು ಅದರ ಎಲ್ಲ ಸ್ತರಗಳೊಂದಿಗೆ ಆರಾಧನೆ ಅಥವಾ 'ದಾಸ್ಯೋಪಾಸನೆ'ಯನ್ನಾಗಿ ಮಾಡುವುದು ಸುಲಭದ ಕೆಲಸವಲ್ಲ. ಅದಕ್ಕೆ ಅತ್ಯಂತ ಕಟ್ಟು ನಿಟ್ಟಾದ ತರಬೇತಿಯ ಅಗತ್ಯವಿದೆ. ವಿಶಿಷ್ಟ ರೀತಿಯಲ್ಲಿ ಮನಸ್ಸನ್ನು ಪಳಗಿಸುವುದು ಅವಶ್ಯಕವಾಗಿದೆ. ಅದಕ್ಕಾಗಿ ಪ್ರಬಲ ಚಾರಿತ್ರ್ಯವನ್ನು ಬೆಳೆಸಬೇಕಾಗಿದೆ, ಹವ್ಯಾಸಗಳೆಲ್ಲವನ್ನೂ ನಿರ್ದಿಷ್ಟ ಚೌಕಟ್ಟಿಗೆ ಬದ್ಧ ಗೊಳಿಸಬೇಕಾಗಿದೆ, ಅದಕ್ಕಾಗಿ ವೈಯಕ್ತಿಕ ಚಾರಿತ್ರ್ಯದ ನಿರ್ಮಾಣವಷ್ಟೇ ಸಾಲದು, ಬದಲಾಗಿ ವ್ಯಾಪಕವಾಗಿ ಜನರನ್ನು ಈ ರೀತಿಯ ಆರಾಧನೆ ಅಥವಾ ದಾಸ್ಯೋಪಾಸನೆಗೆ ಸಿದ್ಧಗೊಳಿಸುವ ಸಾಮೂಹಿಕ ವ್ಯವಸ್ಥೆಯೊಂದನ್ನು ನಿರ್ಮಿಸಬೇಕಾಗಿದೆ. ಅದರಲ್ಲಿ ಸಮೂಹದ ಶಕ್ತಿ ವ್ಯಕ್ತಿಯ ಪಾಲಿಗೆ ಆಸರೆ ಮತ್ತು ಸಹಾಯಕ ಮಾತ್ರವಲ್ಲ ಅವನ ದೌರ್ಬಲ್ಯಗಳನ್ನು ನೀಗಿಸುವ ಸಾಧನವಾಗಿರಬೇಕು. ಈ ಉದ್ದೇಶಕ್ಕಾಗಿಯೇ ಇಸ್ಲಾಮಿನಲ್ಲಿ ನಮಾಝ್, ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್‌ನಂತಹ ಆರಾಧನೆಗಳನ್ನು ಕಡ್ಡಾಯಗೊಳಿಸಲಾಗಿದೆ. ಅದನ್ನು ಆರಾಧನೆ ಎಂದು ಕರೆಯಲಾಗುವುದರ ಅರ್ಥ ಅವು ಮಾತ್ರವೇ ಆರಾಧನೆಗಳಾಗಿವೆ ಎಂದಲ್ಲ. ಬದಲಾಗಿ ಅವು ನೈಜ ಆರಾಧನೆ ಅಥವಾ ದಾಸ್ಯೋಪಾಸನೆಗೆ ಮಾನವನನ್ನು ಸಿದ್ಧ ಪಡಿಸುತ್ತದೆ ಎಂದಾಗಿದೆ. ಇವು ಪ್ರಸ್ತುತ ಉದ್ದೇಶಕ್ಕಾಗಿ ಇರುವ ಕಡ್ಡಾಯ ತರಬೇತಿಯ ಕೋರ್ಸ್ ಆಗಿದೆ. ಅದರಿಂದ ಇಸ್ಲಾಮೀ ವ್ಯವಸ್ಥೆಗೆ ದಾರಿ ಸುಗಮಗೊಳಿಸುವಂತಹ ವಿಶಿಷ್ಟ ಮನೋಭಾವ ಬೆಳೆಯುತ್ತದೆ, ವಿಶಿಷ್ಟ ಚಾರಿತ್ರ್ಯ ನಿರ್ಮಾಣವಾಗುತ್ತದೆ, ಶಿಸ್ತು ಬದ್ಧವಾದ ಅಭ್ಯಾಸ ಮತ್ತು ಹವ್ಯಾಸಗಳ ಭದ್ರ ಚೌಕಟ್ಟು ಸಿದ್ಧವಾಗುತ್ತದೆ, ಮಾನವನ ಜೀವನ ಸಾದ್ಯಂತ ಆರಾಧನೆ ಮತ್ತು ದಾಸ್ಯೋಪಾಸನೆಯಾಗಲು ಅನಿವಾರ್ಯವಾಗಿರುವಂತಹ ಸಾಮೂಹಿಕ ಜೀವನದ ಬುನಾದಿಗಳು ಸುಗಮಗೊಳ್ಳುತ್ತವೆ. ಪ್ರಸ್ತುತ ನಾಲ್ಕು ವಸ್ತುಗಳಲ್ಲದೆ ಬೇರಾವುದರಿಂದಲೂ ಈ ಉದ್ದೇಶ ಸಾಧಿತವಾಗುವುದಿಲ್ಲ. ಆದ್ದರಿಂದಲೇ ಅದನ್ನು ಇಸ್ಲಾಮಿನ ಸ್ತಂಭಗಳು ಎನ್ನಲಾಗಿದೆ.* ಅರ್ಥಾತ್ ಇವು ಇಸ್ಲಾಮೀ ವ್ಯವಸ್ಥೆಯ ಕಟ್ಟಡ ನಿರ್ಮಾಣಗೊಂಡು ಸ್ಥಿರವಾಗಿ ನಿಲ್ಲಲು ಬೇಕಾದ ಸ್ತಂಭಗಳಾಗಿವೆ.

---

* *ಈ ಹಿಂದೆ ಟಿಪ್ಪಣಿಯಲ್ಲಿ ಪ್ರಸ್ತಾವಿಸಲಾದ ಆ ವ್ಯಕ್ತಿಗಳು ಸಾಕ್ಷ್ಯವಚನ ಮತ್ತು ಉಳಿದ*

ನಾಲ್ಕು ಆರಾಧನಾ ಕರ್ಮಗಳು ಇಸ್ಲಾಮಿನ ಸ್ತಂಭವಾಗಿರುವುದನ್ನು ಸ್ಪಷ್ಟವಾಗಿ ನಿರಾಕರಿಸಿದ್ದಾರೆ, ಅದರ ಬದಲು ತನ್ನ ವತಿಯಿಂದ ಇಸ್ಲಾಮಿನ ಹತ್ತು ಸ್ತಂಭಗಳನ್ನು ಸೃಷ್ಟಿಸಿದ್ದಾರೆ. ಈ ಮಹಾನುಭಾವರು ಪರಮ ಅಜ್ಞಾನದಲ್ಲಿ ಸಿಕ್ಕಿ ಹಾಕಿಕೊಂಡಿದ್ದಾರೆ. ಅವರಿಗೆ ಇಸ್ಲಾಮಿನ ಅರಿವೂ ಇಲ್ಲ, ಸ್ತಂಭವೆಂಬುದರ ಅರ್ಥ ಮತ್ತು ತಾತ್ಪರ್ಯವೇನೆಂದೂ ತಿಳಿದಿಲ್ಲ. ಈ ಐದು ವಸ್ತುಗಳನ್ನು ಯಾವ ನೆಲೆಯಲ್ಲಿ ಇಸ್ಲಾಮಿನ ಸ್ತಂಭವೆಂದು ಪರಿಗಣಿಸಲಾಗಿದೆ ಎಂದೂ ಅವರಿಗೆ ತಿಳಿದಿಲ್ಲ. ಈ ಐದು ವಸ್ತುಗಳಿಲ್ಲದಿದ್ದರೆ ಇಸ್ಲಾಮಿನ ನಾಮಾವಶೇಷವಾಗುತ್ತದೆ ಎಂಬುದನ್ನು ಮಂದಟ್ಟು ಮಾಡಲಿಕ್ಕೂ ಅವರಿಗೆ ಸಾಧ್ಯವಿಲ್ಲ. ಪ್ರವಾದಿವರ್ಯರು(ಸ) ಯಾವುದನ್ನು ಇಸ್ಲಾಮಿನ ಸ್ತಂಭಗಳೆಂದು ಪರಿಗಣಿಸಿದ್ದಾರೋ ಅವು ಇಸ್ಲಾಮಿನ ಸ್ತಂಭಗಳಲ್ಲವೆಂದು ಈ ಮಹಾನುಭಾವರು ಹೇಳುತ್ತಾರೆ. ಅದಕ್ಕೆ ಪ್ರತಿಯಾಗಿ ತಾನು ಹೆಣೆದಿರುವ ಹತ್ತು ಅಂಶಗಳನ್ನು ಇಸ್ಲಾಮಿನ ಸ್ತಂಭಗಳೆಂದು ಪರಿಗಣಿಸುತ್ತಾರೆ. ಅಂದರೆ ಶ್ರೀಯುತರ ಪ್ರಕಾರ ಪ್ರವಾದಿವರ್ಯರು (ಸ) ಸಮರ್ಪಿಸಿರುವುದರ ಹೆಸರು ಇಸ್ಲಾಮಲ್ಲ. ಬದಲಾಗಿ ಈ ಕೇಂಬ್ರಿಜ್ ಪಾರಂಗತರು ಹೆಣೆದಿದ್ದು ಮಾತ್ರವೇ ಇಸ್ಲಾಮ್ ಆಗಿದೆ. ಒಂದೆಡೆ ಈ ಮಹಾನುಭಾವರ ಚರ್ವಿತ ಚರ್ವಣಗಳಿದ್ದರೆ, ಇನ್ನೊಂದೆಡೆ ಜನರಲ್ಲಿ ಅಜ್ಞಾನ ಮತ್ತು ಭೌತಿಕತೆ ಎಷ್ಟು ವೃದ್ಧಿಯಾಗಿದೆಯೆಂದರೆ, ಪ್ರಸ್ತುತ ವ್ಯಕ್ತಿಯ ನಾಯಕತ್ವದಲ್ಲಿ ಸ್ಥಾಪನೆಗೊಂಡ ಸಂಘಟನೆಯನ್ನು ಇಸ್ಲಾಮೀ ಸಂಘಟನೆ ಮತ್ತು ಇಸ್ಲಾಮೀ ನಾಯಕತ್ವದ ವ್ಯವಸ್ಥೆಯೆಂದು ಭಾವಿಸುತ್ತಿದ್ದಾರೆ. ನಾಯಕನ ವಿಶ್ವಾಸ, ಧಾರ್ಮಿಕ ಜ್ಞಾನ ಮತ್ತು ಚಾರಿತ್ರ್ಯವನ್ನು ನೋಡುವ ಗೊಡವೆಗೇ ಅವರು ಹೋಗುವುದಿಲ್ಲ. ಸಂಘಟನೆ ಮತ್ತು ನಾಯಕತ್ವದ ವ್ಯವಸ್ಥೆಯಷ್ಟೇ ಅವರ ಲಕ್ಷ್ಯವಾಗಿದೆ. ಅದು ಹ. ಉಮರ್ ಫಾರೂಕ್(ರ) ಅಧೀನದಲ್ಲಿರಲಿ ಅಥವಾ ಹಿಟ್ಲರ್ ಮತ್ತು ಮುಸ್ಸೋಲಿನಿಯ ಅಧೀನದಲ್ಲಿರಲಿ. ಈ ಕಾಲದ ಕ್ಷೋಭೆಗಳು ಯಾವ ಪರಾಕಾಷ್ಠೆಗೆ ತಲಪಿದೆಯೆಂದರೆ ಅದರಿಂದ ಅಲ್ಲಾಹನ ಅಭಯವನ್ನು ಯಾಚಿಸಬೇಕಾಗಿದೆ.

---

# ನಮಾಝ್

## ಸ್ಮರಣೆ

ಮಾನವನ ಜೀವನವನ್ನು ಸಂಪೂರ್ಣವಾಗಿ ಆರಾಧನೆಯನ್ನಾಗಿ ಮಾಡಲು, ತಾನು ದೇವನ ದಾಸನಾಗಿದ್ದೇನೆ ಎಂಬುದರ ಪರಿಜ್ಞಾನ ಸದಾ ಜಾಗೃತವಾಗಿರುವುದು ಮತ್ತು ಮನಸ್ಸನ್ನು ಆವರಿಸಿಕೊಂಡಿರುವುದು ಅತ್ಯಂತ ಅವಶ್ಯಕ. ದೇವನ ದಾಸನೆಂಬ ನೆಲೆಯಲ್ಲೇ ಅವನಿಗೆ ಭೂಮಿಯಲ್ಲಿ ಸರ್ವಸ್ವವನ್ನೂ ಮಾಡಬೇಕಾಗಿದೆ. ಈ ಪರಿಜ್ಞಾನವನ್ನು ಪದೇಪದೇ ಉದ್ದೀಪಿಸುವ ಮತ್ತು ನವೀಕರಿಸುವ ಅಗತ್ಯವಿದೆ. ಏಕೆಂದರೆ ಮಾನವ ನಿಜವಾಗಿ ಯಾವ ದೇವನ ದಾಸನಾಗಿದ್ದಾನೋ ಅವನು ಅಗೋಚರನಾಗಿದ್ದಾನೆ, ಇಂದ್ರಿಯಗಳಿಂದ ದೂರವಿದ್ದಾನೆ. ಇದಕ್ಕೆ ಪ್ರತಿಯಾಗಿ ಪಿಶಾಚಿ ಸ್ವತಃ ವ್ಯಕ್ತಿಯ ಮನಸ್ಸಿನಲ್ಲೇ ಇದೆ. ಕ್ಷಣ ಕ್ಷಣವೂ ನೀನು ನನ್ನ ದಾಸನಾಗಿರುವೆ ಎಂದು ಅದು ವ್ಯಕ್ತಿಯನ್ನು ಪ್ರೇರೇಪಿಸುತ್ತಿರುತ್ತದೆ. ಲೋಕದಾದ್ಯಂತ ಹರಡಿಕೊಂಡಿರುವ ಲಕ್ಷಗಟ್ಟಲೆ, ಕೋಟಿಗಟ್ಟಲೆ ಪಿಶಾಚಿಗಳ ಪೈಕಿ ಪ್ರತಿಯೊಂದು ಪಿಶಾಚಿಯೂ ಮಾನವ ತನ್ನ ದಾಸನಾಗಿದ್ದಾನೆ ಎಂದು ವಾದಿಸುತ್ತಿವೆ. ಈ ಪಿಶಾಚಿಗಳ ಅಸ್ತಿತ್ವ ವ್ಯಕ್ತಿಯ ಅನುಭವಕ್ಕೆ ಬರುತ್ತದೆ, ಅವು ಕಣ್ಣಿಗೆ ಕಾಣುತ್ತವೆ, ಪ್ರತಿ ನಿಮಿಷ ಹೊಸ ಹೊಸ ವಿಧಾನಗಳಿಂದ ಅವು ತಮ್ಮ ಶಕ್ತಿ ಅನುಭವಕ್ಕೆ ಬರುವಂತೆ ಮಾಡುತ್ತವೆ. ಈ ಎಲ್ಲ ಕಾರಣಗಳಿಂದಾಗಿ ತಾನು ಅಲ್ಲಾಹನ ದಾಸನಾಗಿದ್ದೇನೆ ಮತ್ತು ಅವನ ವಿನಾ ತಾನು ಯಾರ ದಾಸ್ಯವನ್ನೂ ಕೈಗೊಳ್ಳಬಾರದು ಎಂಬ ಪರಿಜ್ಞಾನ ವ್ಯಕ್ತಿಯ ಮನಸ್ಸಿನಿಂದ ಕಣ್ಮರೆಯಾಗುತ್ತದೆ. ಅದನ್ನು ಜಾಗೃತವಾಗಿರಿಸಲು ಮಾನವ ದೇವನ ದೇವತ್ವದ ಬಗ್ಗೆ ಮೌಖಿಕ ಸಂಕಲ್ಪ ಮಾಡಿಕೊಂಡರೆ ಸಾಲದು, ವೈಚಾರಿಕ ಸೂತ್ರದ ರೂಪದಲ್ಲಿ ಅದನ್ನು ಅರ್ಥ ಮಾಡಿಕೊಂಡರೆ ಸಾಕಾಗದು. ಅದಕ್ಕಾಗಿ ಈ ಪರಿಜ್ಞಾನವನ್ನು ಮತ್ತೆ ಮತ್ತೆ ಉದ್ದೀಪಿಸುವುದು ಮತ್ತು ನವೀಕರಿಸುವುದು ಅನಿವಾರ್ಯವಾಗಿದೆ. ಈ ಕೆಲಸವನ್ನೇ ನಮಾಝ್ ಮಾಡುತ್ತದೆ. ಬೆಳಗ್ಗೆ ಎದ್ದ ತಕ್ಷಣ ಎಲ್ಲ ಕೆಲಸಗಳಿಗಿಂತ ಮೊದಲು ನಮಾಝ್ ನಿಮಗೆ ಅದನ್ನೇ ನೆನಪಿಸುತ್ತದೆ. ಅನಂತರ ನೀವು ದೈನಂದಿನ ಕಾರ್ಯಕಲಾಪಗಳಲ್ಲಿ ತಲ್ಲೀನರಾಗಿರುವಾಗ ಎರಡು ಬಾರಿ ಸ್ವಲ್ಪ ಹೊತ್ತಿಗಾಗಿ ನಿಮ್ಮನ್ನು ಎಳೆದು ತರುತ್ತದೆ. ದಾಸ್ಯ ಪ್ರಜ್ಞೆ ನಿಮ್ಮಲ್ಲಿ ಸ್ವಲ್ಪವಾದರೂ ಕುಂಠಿತವಾಗಿದ್ದರೆ ಅದನ್ನು ನವೀಕರಿಸುವುದೇ ಇದರ ಉದ್ದೇಶ. ಅನಂತರ ಸಂಜೆಯ ಮನರಂಜನೆ ಮತ್ತು ಉಲ್ಲಾಸದ ಅವಧಿ ಆಸನ್ನವಾದಾಗ ನಮಾಝ್, ನಿಮಗೆ ಮತ್ತೆ ನೀವು ಅಲ್ಲಾಹನ ದಾಸರಾಗಿದ್ದೀರಿ ನಿಮ್ಮ ಮನೋಪಿಶಾಚಿಯ ದಾಸನಲ್ಲ ಎಂಬುದನ್ನು ನೆನಪಿಸುತ್ತದೆ. ಅನಂತರ ರಾತ್ರಿ ಆವರಿಸುತ್ತದೆ. ರಾತ್ರಿಯನ್ನು ಪಾಪಕೃತ್ಯಗಳ ಮೂಲಕ ಇನ್ನಷ್ಟು ಕರಾಳಗೊಳಿಸಲು ಒಳಗಿನ ಮತ್ತು ಹೊರಗಿನ ಪಿಶಾಚಿಗಳು ದಿನವಿಡೀ ಕಾಯುತ್ತಿರುತ್ತವೆ. ಆಗ ನಮಾಝ್ ನಿಮಗೆ ಮತ್ತೆ ನಿಮ್ಮ ಕೆಲಸ ಅಲ್ಲಾಹನ ದಾಸ್ಯವಾಗಿದೆಯೇ ಹೊರತು ಪಿಶಾಚಿಯ ದಾಸ್ಯವಲ್ಲ ಎಂದು ನೆನಪಿಸುತ್ತದೆ.

ಇದು ನಮಾಝ್‌ನಿಂದಾಗುವ ಮೊದಲ ಪ್ರಯೋಜನ. ಆದ್ದರಿಂದಲೇ ಕುರ್‌ಆನ್‌ನಲ್ಲಿ ನಮಾಝನ್ನು 'ದಿಕ್ರ್' ಎನ್ನಲಾಗಿದೆ. ಅದರರ್ಥ ಸ್ಮರಣೆ ಎಂದಾಗಿದೆ. ನಮಾಝ್‌ನಲ್ಲಿ ಒಂದು ವೇಳೆ ಬೇರೇನೂ ಪ್ರಯೋಜನವಿರದಿದ್ದರೂ ಅದರ ಈ ಗುಣವೇ ಅದನ್ನು ಇಸ್ಲಾಮಿನ ಸ್ತಂಭವೆಂದು ಪರಿಗಣಿಸಲು ಸಾಕಾಗುತ್ತಿತ್ತು. ಸ್ಮರಣೆಯ ವಿನಾ ವ್ಯಕ್ತಿ ಕಾರ್ಯತಃ ದೇವನ ದಾಸನಾಗಿರಲು ಸಾಧ್ಯವಿಲ್ಲ. ನಮಾಝಿನಿಂದುಂಟಾಗುವ ಈ ಪ್ರಯೋಜನದ ಬಗ್ಗೆ ಆಲೋಚಿಸಿದಷ್ಟು ಅದರ ವಾಸ್ತವಿಕತೆ ನಮಗೆ ಮನದಟ್ಟಾಗುತ್ತದೆ.

## ಕರ್ತವ್ಯ ಪ್ರಜ್ಞೆ

ಅನಂತರ ಜೀವನದ ಪ್ರತಿಯೊಂದು ಹಂತದಲ್ಲಿ ದೇವನ ಆಜ್ಞೆಗಳನ್ನು ನಾವು ಪಾಲಿಸಬೇಕಾಗಿದೆ. ದೇವನು ಸಮರ್ಪಿಸಿರುವ ಸೇವೆಗಳನ್ನು ಅವನು ವಿಧಿಸಿರುವ ಮೇರೆಗಳನ್ನು ಪಾಲಿಸುತ್ತಾ ನಿಭಾಯಿಸಬೇಕಾಗಿದೆ. ಅದಕ್ಕಾಗಿ ನಮ್ಮಲ್ಲಿ ಕರ್ತವ್ಯ ಪ್ರಜ್ಞೆ ಬೆಳೆಯಬೇಕಾಗಿರುವುದು ಅನಿವಾರ್ಯವಾಗಿದೆ. ಕರ್ತವ್ಯವನ್ನು ಪ್ರಯತ್ನಪೂರ್ವಕ ಮತ್ತು ವಿಧೇಯತೆಯೊಂದಿಗೆ ಪಾಲಿಸುವುದು ನಿಮ್ಮ ಜಾಯಮಾನವಾಗಿ ಮಾರ್ಪಡಬೇಕಾಗಿದೆ. ಕರ್ತವ್ಯವೆಂದರೇನೆಂದು ತಿಳಿಯದ ವ್ಯಕ್ತಿಗೆ ಯಾವುದಾದರೂ ಕರ್ತವ್ಯವನ್ನು ವಹಿಸಿಕೊಡುವುದರಲ್ಲಿ ಅರ್ಥವಿಲ್ಲ. ಅವನೆಂದೂ ತನ್ನ ಕರ್ತವ್ಯವನ್ನು ಪಾಲಿಸಲಾರನೆಂಬುದು ಸರ್ವವಿಧಿತ. ಹಾಗೆಯೇ ಕರ್ತವ್ಯವೇನೆಂದು ತಿಳಿದಿರುವ ಆದರೆ ಕರ್ತವ್ಯದ ಪೂರ್ಣ ಪರಿಜ್ಞಾನದ ಹೊರತಾಗಿಯೂ ಅದನ್ನು ಪಾಲಿಸುವ ಬಗ್ಗೆ ಅಸಡ್ಡೆ ತೋರುವಷ್ಟು ಕೆಟ್ಟ ತರಬೇತಿಯನ್ನು ಪಡೆದಿರುವ ವ್ಯಕ್ತಿಯ ಬಗ್ಗೆ ಯಾವುದೇ ರೀತಿಯ ವಿಶ್ವಾಸ ತಳೆಯುವಂತಿಲ್ಲ. ಅವನು ಯಾವುದೇ ರೀತಿಯ ಪ್ರಾಯೋಗಿಕ ಸೇವೆಗೆ ಅರ್ಹನಾಗಲಾರ. ಆದ್ದರಿಂದ ಯಾವುದೇ ರೀತಿಯ ಜವಾಬ್ದಾರಿಕೆಯ ಕೆಲಸದಲ್ಲಿ ನೇಮಿಸಬೇಕಾದರೆ ಅವನಿಗೆ ಕರ್ತವ್ಯ ಪ್ರಜ್ಞೆ ಮತ್ತು ಅನುಸರಣೆಯ ತರಬೇತಿ ನೀಡಬೇಕಾದುದು ಅನಿವಾರ್ಯವಾಗಿದೆ. ಇದರಿಂದ ನಿಜವಾಗಿ ಅರ್ಹರೆನಿಸಿದ ವ್ಯಕ್ತಿಗಳು ಸಿದ್ಧರಾಗುತ್ತಾರೆ. ಮಾತ್ರವಲ್ಲ ಪ್ರತಿನಿತ್ಯ ಅರ್ಹ ಮತ್ತು ಅನರ್ಹ ವ್ಯಕ್ತಿಯ ನಡುವಿನ ಅಂತರ ವ್ಯಕ್ತವಾಗುತ್ತಿರುತ್ತದೆ. ಸೇವೆ ಸಲ್ಲಿಸುವ ಅಭ್ಯರ್ಥಿಯ ಪೈಕಿ ಯಾರು ವಿಶ್ವಾಸಾರ್ಹರು ಮತ್ತು ಯಾರು ವಿಶ್ವಾಸಾರ್ಹರಲ್ಲ ಎಂಬ ಸತ್ಯ ಅನುದಿನವೂ ಬಯಲಾಗುತ್ತಿರುತ್ತದೆ. ಯಾವುದೇ ರೀತಿಯ ಪ್ರಾಯೋಗಿಕ ಸೇವೆಗೆ ಸದಾ 'ಪ್ರಾಯೋಗಿಕ ಪರೀಕ್ಷೆ'ಯ ಮೂಲಕ ವ್ಯಕ್ತಿಗಳನ್ನು ಒರೆ ಹಚ್ಚಲಾಗುತ್ತದೆ. ಆ ಮೂಲಕ ವಿಶ್ವಾಸಕ್ಕೆ ಅರ್ಹರಲ್ಲದ ವ್ಯಕ್ತಿಗಳು ಉದ್ಯೋಗ ಗಳಿಸದಂತೆ ಕಾಯ್ದುಕೊಳ್ಳಲಾಗುತ್ತದೆ.

ಸೇನೆಯನ್ನು ತೆಗೆದುಕೊಳ್ಳಿ. ಅನೇಕ ರೀತಿಯಲ್ಲಿ ಅಲ್ಲಿ ಕರ್ತವ್ಯವನ್ನು ಅರಿಯುವ ಮತ್ತು ಅದನ್ನು ಪಾಲಿಸುವ ಅಭ್ಯಾಸ ಮಾಡಿಸಲಾಗುತ್ತದೆ. ದಿನ ರಾತ್ರಿಯ ವೇಳೆ ಅನೇಕ ಬಾರಿ ಸೈರನ್ ಬಾರಿಸಲಾಗುತ್ತದೆ. ಸೈನಿಕರೆಲ್ಲಾ ಒಂದೆಡೆ ಸೇರುವಂತೆ ಆಜ್ಞಾಪಿಸಲಾಗುತ್ತದೆ, ಅವರಿಂದ ಕವಾಯಿತುಗಳನ್ನು ಮಾಡಿಸಲಾಗುತ್ತದೆ. ಇದನ್ನೆಲ್ಲಾ ಮಾಡಿಸಲಾಗುವುದರ ಪ್ರಾಥಮಿಕ ಉದ್ದೇಶವೇನೆಂದರೆ ಸೈನಿಕರಿಗೆ ಆಜ್ಞಾಪಾಲನೆಯ ಅಭ್ಯಾಸವಾಗಬೇಕು. ಅವರಲ್ಲಿ ಕರ್ತವ್ಯ

ಪ್ರಜ್ಞೆ ಮೂಡಬೇಕು. ಅವರಲ್ಲಿ ಒಂದು ವ್ಯವಸ್ಥೆಯ ಅಧೀನದಲ್ಲಿ ತರಬೇತಿಯೊಂದಿಗೆ ಕೆಲಸ ಮಾಡುವ ಅಭ್ಯಾಸ ಬೆಳೆಯಬೇಕು. ಅದರ ಎರಡನೆಯ ಉದ್ದೇಶ ಪ್ರತಿನಿತ್ಯ ಸೈನಿಕರನ್ನು ಪರೀಕ್ಷಿಸುವುದಾಗಿದೆ. ಸೇನೆಗೆ ಸೇರ್ಪಡೆಗೊಂಡವರ ಪೈಕಿ ಯಾರು ಉಪಯೋಗಕ್ಕೆ ಬರುವವರು ಮತ್ತು ಯಾರು ನಿರುಪಯುಕ್ತರು ಎಂಬ ಅಂತರ ಬಯಲಾಗ ಬೇಕೆಂಬುದು ಇದರ ಉದ್ದೇಶವಾಗಿದೆ. ಸೀಟಿಯ ಶಬ್ದ ಕೇಳಿಯೂ ಮನೆಯಲ್ಲಿ ಕುಳಿತುಕೊಳ್ಳುವ ಮತ್ತು ಅಪ್ಪಣೆಯಂತೆ ಕವಾಯತುಗಳನ್ನು ನಡೆಸದ ಮೈಗಳ್ಳ ಮತ್ತು ಅನರ್ಹ ವ್ಯಕ್ತಿಗಳನ್ನು ಮೊದಲೇ ಸೇನೆಯಿಂದ ಹೊರಗಿಡಲಾಗುತ್ತದೆ. ಏಕೆಂದರೆ ನಿಜವಾಗಿಯೂ ಅವಶ್ಯಕತೆ ತಲೆದೋರಿದಾಗ ಅವರು ಕರ್ತವ್ಯದ ಕರೆಗೆ 'ಓ'ಗೊಡುತ್ತಾರೆ ಎಂದು ನಂಬುವಂತಿಲ್ಲ.

ಲೌಕಿಕ ಸೇನೆಗಳಿಗೆ ಎಂದಾದರೂ ಹಲವು ವರ್ಷಗಳಿಗೊಮ್ಮೆ ರಂಗಕ್ಕಿಳಿಯುವ ಅವಶ್ಯಕತೆ ತಲೆದೋರುತ್ತದೆ. ಅದಕ್ಕಾಗಿ ಅನುದಿನವೂ ಸೈನಿಕರಿಗೆ ತರಬೇತಿ ನೀಡುವ ಮತ್ತು ಅವರನ್ನು ಪರೀಕ್ಷಿಸುವ ವ್ಯವಸ್ಥೆ ಮಾಡಲಾಗುತ್ತದೆ. ಆದರೆ ಇಸ್ಲಾಮ್ ಸಿದ್ಧಪಡಿಸುವ ಸೇನೆ ಸದಾ ಕಾರ್ಯರಂಗದಲ್ಲಿರಬೇಕಾಗುತ್ತದೆ. ಅದು ಸದಾ ಕಾರ್ಯತತ್ಪರವಾಗಿರುತ್ತದೆ. ಅದು ಸದಾ ಸಮರೋಪಾಧಿಯ ಕೆಲಸಗಳಲ್ಲಿ ನಿರತವಾಗಿರಬೇಕಾಗುತ್ತದೆ. ಜೀವನದ ಪ್ರತಿ ನಿಮಿಷ ಮತ್ತು ಪ್ರತಿ ಘಳಿಗೆ ಅದು ಕರ್ತವ್ಯ ನಿಭಾಯಿಸಬೇಕಾಗುತ್ತದೆ. ಸದಾ ಸೇವಾ ನಿರತವಾಗಿರಬೇಕಾಗಿದೆ. ಪೈಶಾಚಿಕ ಶಕ್ತಿಗಳ ವಿರುದ್ಧ ಹೋರಾಡಬೇಕಾಗಿದೆ. ದೇವನ ಮೇರೆಗಳ ಪಾಲನೆ ಮಾಡಬೇಕಾಗಿದೆ. ದೇವನ ಆದೇಶಗಳನ್ನು ಜಾರಿಗೊಳಿಸಬೇಕಾಗಿದೆ. ಇಸ್ಲಾಮ್ ಕೇವಲ ವಿಶ್ವಾಸ ಆಧಾರಿತವಾದ ಒಂದು ಪಂಥವಲ್ಲ. ಬದಲಾಗಿ ಅದು ಕಾರ್ಯರಂಗಕ್ಕಿಳಿದು ಸಲ್ಲಿಸಬೇಕಾದ ಸೇವೆಯಾಗಿದೆ. ವಿನಾಯಿತಿ, ಬಿಡುವು ಮತ್ತು ವಿಶ್ರಾಂತಿಗಳಿಗೂ ಸಮಯವಿಲ್ಲದಂತಹ ಪ್ರಾಯೋಗಿಕ ಸೇವೆಯಾಗಿದೆ. ದಿನ-ರಾತ್ರಿಗಳ ಇಪ್ಪತ್ತ ನಾಲ್ಕು ಗಂಟೆಯೂ ನಿರಂತರ ಮತ್ತು ಅವಿರತ ಸೇವೆಯಲ್ಲಿ ನಿರತನಾಗಿರಬೇಕಾಗಿದೆ. ಈಗ ಸೇನೆಯ ಉದಾಹರಣೆಯನ್ನು ಮುಂದಿಟ್ಟುಕೊಂಡು, ಈ ಕಠಿಣ ಪ್ರಾಯೋಗಿಕ ಸೇವೆಗೆ, ಎಂತಹ ಕಠಿಣ ಶಿಸ್ತು, ಪ್ರಬಲ ತರಬೇತಿ ಮತ್ತು ಪರಮ ಪರೀಕ್ಷೆಯ ಅಗತ್ಯವಿದೆ ಎಂದು ಅಂದಾಜಿಸಿ ನೋಡಿ. ಕೇವಲ ವಿಶ್ವಾಸದ ಬಾಯ್ದೆರೆ ಅಂಗೀಕಾರ ಮಾಡುವವನು ಈ ಕಾರ್ಯಕ್ಕೆ ಹೇಗೆ ಪರ್ಯಾಪ್ತನಾಗಲು ಸಾಧ್ಯ? ಅಂತಹ ವ್ಯಕ್ತಿಯನ್ನು ಇಷ್ಟು ಮಹತ್ತರವಾದ ಸೇವೆಯನ್ನು ಸಲ್ಲಿಸಲಿಕ್ಕಿರುವ ಸೇನೆಯಲ್ಲಿ ಯಾಕಿಟ್ಟುಕೊಳ್ಳಬೇಕು? ವಿಶ್ವಾಸದ ಪ್ರಕಟನೆ ಮಾಡುವುದು ಈ ಸೇವೆಗೆ ಸೇರಿಸಿಕೊಳ್ಳಲು ತನ್ನ ಅಭ್ಯರ್ಥಿತನವನ್ನು ಪ್ರಕಟಿಸುವುದಕ್ಕೆ ಸಮಾನವಾಗಿದೆ. ಈ ಪ್ರಕಟನೆಯ ನಂತರ ತನ್ನನ್ನು ಶಿಸ್ತಿಗೆ ಬದ್ಧಗೊಳಿಸುವುದು ಅನಿವಾರ್ಯವಾಗಿದೆ. ಈ ಶಿಸ್ತಿನಲ್ಲಿದ್ದುಕೊಂಡೇ ಅವನು ಇಸ್ಲಾಮಿನ ಪಾಲಿಗೆ ಉಪಯುಕ್ತ ವ್ಯಕ್ತಿಯಾಗಬಲ್ಲ. ತನ್ನನ್ನು ಅವನು ಶಿಸ್ತಿನ ಸಿಪಾಯಿಯನ್ನಾಗಿ ಮಾಡುವುದಿಲ್ಲ, ಕರ್ತವ್ಯದ ಕರೆಗೆ ಓಗೊಡುವುದಿಲ್ಲ, ಆದೇಶಗಳ ಪಾಲನೆಯ ಬಗ್ಗೆ ಯಾವುದೇ ಸನ್ನದ್ಧತೆಯನ್ನು ಅವನು ಹೊಂದಿರುವುದಿಲ್ಲವೆಂದಾದರೆ ಇಸ್ಲಾಮಿನ ಪಾಲಿಗೆ ಅವನು ನಿರುಪಯುಕ್ತ ವ್ಯಕ್ತಿಯಾಗಿದ್ದಾನೆ. ದೇವನಿಗಾಗಲಿ ಧರ್ಮಕ್ಕಾಗಲಿ ಅಂತಹ ನಿರರ್ಥಕ ವ್ಯಕ್ತಿಯ ಯಾವ ಅವಶ್ಯಕತೆಯೂ ಇಲ್ಲ.

ಈ ಪರಮ ಉದ್ದೇಶದಿಂದಾಗಿಯೇ ದಿನ-ರಾತ್ರಿಗಳ ವೇಳೆ ಐದು ಹೊತ್ತು ನಮಾಝನ್ನು

ಕಡ್ಡಾಯಗೊಳಿಸಲಾಗಿದೆ. ದೇವನ ಸಿಪಾಯಿಗಳು ನಾಲ್ಕೂ ನಿಟ್ಟಿನಿಂದ ಓಡೋಡಿ ಬಂದು ನಾವು ಕರ್ತವ್ಯದ ಕರೆಯನ್ನು ಬಲ್ಲವರಾಗಿದ್ದೇವೆ ಎಂದು ಸಾಬೀತು ಪಡಿಸುವಂತಾಗಲು ಐದು ಬಾರಿ ಸೀಟಿ ಬಾರಿಸಲಾಗುತ್ತದೆ. ಅಲ್ಲಾಹನ ಪರಮ ಅಧಿಕಾರವನ್ನು ನಾವು ಅಂಗೀಕರಿಸುತ್ತೇವೆ ಮತ್ತು ಅವನ ಆದೇಶಗಳ ಪಾಲನೆಗೆ ನಾವು ಸದಾ ಸಿದ್ಧರಿದ್ದೇವೆ ಎಂದೂ ಅವರು ಸಾಬೀತು ಪಡಿಸುತ್ತಾರೆ. ಈ ವಿಧಾನದಿಂದ ಒಂದೆಡೆ ಸಿಪಾಯಿಗಳ ತರಬೇತಿಯಾಗುತ್ತದೆ, ಮತ್ತೊಂದೆಡೆ ಸತ್ಯವಿಶ್ವಾಸ ಮತ್ತು ಕಪಟವಿಶ್ವಾಸಿಗಳ ನಡುವಿನ ವ್ಯತ್ಯಾಸ ಬಯಲಾಗುತ್ತದೆ. 'ಅದಾನ್' ಕರೆಗೆ ಕಟ್ಟು ನಿಟ್ಟಾಗಿ 'ಓ'ಗೊಡುವ ಮತ್ತು ನಿಯಮಬದ್ಧವಾಗಿ ವರ್ತಿಸುವ ಜನರಲ್ಲಿ ಕರ್ತವ್ಯಪ್ರಜ್ಞೆ, ಕ್ರಿಯಾಶೀಲತೆ, ಶಿಸ್ತು ಮತ್ತು ಅನುಸರಣಾ ಮನೋಭಾವ ಬೆಳೆಯುತ್ತದೆ. 'ಅದಾನ್' ಕರೆ ಕೇಳಿಯೂ ತನ್ನ ಜಾಗದಿಂದ ಕದಲದವರು ತಮ್ಮ ಕೃತಿಯ ಮೂಲಕ ತಾವು ಕರ್ತವ್ಯವನ್ನರಿಯದವರು ಅಥವಾ ಅರಿತೂ ಅದಕ್ಕೆ ಸನ್ನದ್ಧರಾಗದವರು ಎಂಬುದನ್ನು ಸಾಬೀತು ಪಡಿಸುತ್ತಾರೆ. ಒಂದೋ ಅವರು ಅದನ್ನು ಕಡ್ಡಾಯವೆಂದು ಸಾರಿದ ಆ ಪ್ರಾಧಿಕಾರವನ್ನೇ (Authority) ಒಪ್ಪುವುದಿಲ್ಲ ಅಥವಾ ಅವರ ಮಾನಸಿಕ ಸ್ಥಿತಿ ಎಷ್ಟು ದುರ್ಬಲವಾಗಿದೆಯೆಂದರೆ ಅವರು ಯಾರನ್ನು ತಮ್ಮ ಆರಾಧ್ಯನೆಂದು ನಂಬಿದ್ದಾರೋ ಅವನ ಪ್ರಾಥಮಿಕ ಮತ್ತು ಪ್ರಮುಖ ಆಜ್ಞೆಯನ್ನು ಪಾಲಿಸಲಿಕ್ಕೂ ಅವರು ಸಿದ್ಧರಿಲ್ಲ. ಅವರು ವಿಶ್ವಾಸವಿಡುವವರಾಗಿದ್ದರೂ ತಮ್ಮ ವಿಶ್ವಾಸದ ಪಾಲಿಗೆ ಅವರು ಸತ್ಯ ಸಂಧರಲ್ಲ. ಯಾವುದನ್ನು ಸತ್ಯವೆಂದು ನಂಬಿದ್ದಾರೋ ಅದರಂತೆ ವರ್ತಿಸಲಿಕ್ಕಾಗಿ ಶ್ರಮವಹಿಸಲು ಅವರು ಸಿದ್ಧರಿಲ್ಲ. ಮೊದಲನೇ ಗುಂಪಿಗೆ ಸೇರಿದವರಾಗಿದ್ದರೆ ಅವರು ಮುಸ್ಲಿಮರೇ ಅಲ್ಲವೆಂದರ್ಥ. ಎರಡನೇ ಗುಂಪಿಗೆ ಸೇರಿದ್ದರೆ ಅವರು ಇಸ್ಲಾಮೀ ಸಮೂಹದಲ್ಲಿರಲು ಅನರ್ಹರಾಗಿರುವಷ್ಟರ ಮಟ್ಟಿಗೆ ನಿರುಪಯುಕ್ತ ವ್ಯಕ್ತಿಗಳಾಗಿದ್ದಾರೆ. ಆದ್ದರಿಂದಲೇ ಪವಿತ್ರ ಕುರ್‌ಆನ್‌ನಲ್ಲಿ ನಮಾಝಿನ ಬಗ್ಗೆ ಹೀಗೆ ಪ್ರಸ್ತಾವಿಸಲಾಗಿದೆ.

إِنَّهَا لَكَبِيرَةٌ إِلَّا عَلَى الْخَاشِعِينَ -

"ಖಂಡಿತವಾಗಿಯೂ ನಮಾಝ್ ಅತ್ಯಂತ ಕಷ್ಟಕರ ಕಾರ್ಯ. ಆದರೆ ಅಲ್ಲಾಹನನ್ನು ಭಯಪಡುವ ಆಜ್ಞಾಪಾಲಕ ದಾಸರಿಗೆ ಅದು ಕಷ್ಟಕರವಲ್ಲ."

(2:45)

ಅರ್ಥಾತ್ ಯಾರು ದೇವನ ಅನುಸರಣೆ ಮತ್ತು ದಾಸ್ಯಕ್ಕೆ ಸಿದ್ಧರಿಲ್ಲವೋ ಅವರ ಪಾಲಿಗೆ ಮಾತ್ರವೇ ನಮಾಝ್ ಭಾರವಾಗಿ ಪರಿಣಮಿಸುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಯಾರ ಪಾಲಿಗೆ ನಮಾಝ್ ಭಾರವಾಗಿ ಪರಿಣಮಿಸುತ್ತದೋ ಅವರು ತಾವು ದೇವನ ದಾಸ್ಯ ಮತ್ತು ಅನುಸರಣೆಗೆ ಸಿದ್ಧರಿಲ್ಲ ಎಂಬುದರ ಸಾಕ್ಷ್ಯ ನೀಡುತ್ತಾರೆ. ಆದ್ದರಿಂದಲೇ ಅಲ್ಲಾಹನು ಹೀಗೆ ಹೇಳಿದ್ದಾನೆ:

فَإِنْ تَابُوا وَأَقَامُوا الصَّلَاةَ وَآتَوُا الزَّكَاةَ فَإِخْوَانُكُمْ فِي الدِّينِ -

"ಇವರು ಪಶ್ಚಾತ್ತಾಪ ಪಟ್ಟರೆ ಮತ್ತು ನಮಾಝನ್ನು ಸಂಸ್ಥಾಪಿಸಿ ಝಕಾತ್ ಕೊಟ್ಟರೆ,

ನಿಮ್ಮ ಧರ್ಮ ಬಾಂಧವರಾಗಿರುತ್ತಾರೆ." (9:11)

ಅರ್ಥಾತ್ ನಮಾಝಿನ ಹೊರತು ವ್ಯಕ್ತಿ ಇಸ್ಲಾಮಿನ ಧಾರ್ಮಿಕ ಭ್ರಾತೃತ್ವದಲ್ಲಿ ಸೇರಲು ಸಾಧ್ಯವಿಲ್ಲ.

ಆದ್ದರಿಂದಲೇ ಪವಿತ್ರ ಕುರ್‌ಆನ್ ತನ್ನ ಬಗ್ಗೆ ಹೀಗೆನ್ನುತ್ತದೆ:

هُدًى لِّلْمُتَّقِينَ الَّذِينَ يُؤْمِنُونَ بِالْغَيْبِ وَيُقِيمُونَ الصَّلٰوةَ وَمِمَّا رَزَقْنَاهُمْ يُنفِقُونَ۔

"ಭಯಭಕ್ತಿಯುಳ್ಳವರಿಗೆ, ಪರೋಕ್ಷದ ಮೇಲೆ ವಿಶ್ವಾಸವಿರಿಸುವವರಿಗೆ ಮತ್ತು ನಾವು ನೀಡಿರುವ ಸಂಪತ್ಸೌಕರ್ಯಗಳಿಂದ ವ್ಯಯಿಸುವವರಿಗೆ ಇದು ಮಾರ್ಗದರ್ಶಿ." (2:2-3)

ಆದ್ದರಿಂದಲೇ ಕಪಟವಿಶ್ವಾಸಿಗಳ ಗುಣಗಳನ್ನು ಪ್ರಸ್ತಾಪಿಸುತ್ತಾ ಹೀಗೆನ್ನಲಾಗಿದೆ-

وَإِذَا قَامُوا إِلَى الصَّلٰوةِ قَامُوا كُسَالَىٰ۔

"ಇವರು ನಮಾಝ್ ಮಾಡಲು ಅರೆ ಮನಸ್ಸಿನಿಂದ ಏಳುತ್ತಾರೆ." (4:142)

الَّذِينَ هُمْ عَن صَلَاتِهِمْ سَاهُونَ۔

"ಅವರು ತಮ್ಮ ನಮಾಝಿನ ಬಗ್ಗೆ ಅನಾಸ್ಥೆ ತೋರುತ್ತಾರೆ." (107:5)

ಆದ್ದರಿಂದಲೇ ಪ್ರವಾದಿವಚನದಲ್ಲಿ ಹೀಗೆನ್ನಲಾಗಿದೆ:

بَيْنَ الْعَبْدِ وَبَيْنَ الْكُفْرِ تَرْكُ الصَّلٰوةِ۔

"ಸತ್ಯವಿಶ್ವಾಸಿ ದಾಸ ಮತ್ತು ಸತ್ಯನಿಷೇಧಿಯ ನಡುವಿನ ವ್ಯತ್ಯಾಸ ನಮಾಝನ್ನು ತೊರೆಯುವುದಾಗಿದೆ." (ಮುಸ್ಲಿಮ್)

ಅರ್ಥಾತ್ ನಮಾಝನ್ನು ತೊರೆಯುವ ಸೇತುವಿನ ಮೂಲಕ ವ್ಯಕ್ತಿ ಸತ್ಯವಿಶ್ವಾಸದಿಂದ ಸತ್ಯನಿಷೇಧದೆಡೆಗೆ ಪ್ರವೇಶಿಸುತ್ತಾನೆ.

ಆದ್ದರಿಂದಲೇ ಲೋಕಾನುಗ್ರಹಿ ಪ್ರವಾದಿವರ್ಯರು(ಸ) ಹೇಳಿದರು: "ಅದಾನ್‌ನ ಕರೆ ಕೇಳಿಯೂ ಯಾರು ತಮ್ಮ ಮನೆಗಳಿಂದ ಹೊರಡುವುದಿಲ್ಲವೋ ಅವರ ಮನೆಗೆ ಕೊಳ್ಳಿ ಇಡಬೇಕೆಂದು ನನಗನಿಸುತ್ತದೆ."

ಇನ್ನೊಂದು ಸಂದರ್ಭದಲ್ಲಿ ಅವರು ಹೇಳಿದರು,

العهد بيننا و بينهم الصلوة فمن تركها فقد كفر۔

"ನಮ್ಮ ಮತ್ತು ಅರೇಬಿಯಾದ ಬದವಿಗಳ ನಡುವಿನ ಸಂಬಂಧಕ್ಕೆ ಆಧಾರ ನಮಾಝ್ ಆಗಿದೆ. ಯಾರು ಅದನ್ನು ತೊರೆಯುತ್ತಾರೋ ಅವರು ಸತ್ಯನಿಷೇಧಿ ಎಂದು ಪರಿಗಣಿಸಲ್ಪಡುವರು."

(ತಿರ್ಮಿದಿ, ನಸಾಯಿ, ಇಬ್ನ್‌ಮಾಜಃ)

ಇಂದು ಧರ್ಮದ ಬಗ್ಗೆ ಅಜ್ಞಾನ ವ್ಯಾಪಕವಾಗಿದೆ. ಆದ್ದರಿಂದ ನಮಾಝ್ ನಿರ್ವಹಿಸದ ಮತ್ತು 'ಅದಾನ್' ಕರೆ ಕೇಳಿಯೂ ಅಲುಗಾಡದ ವ್ಯಕ್ತಿಗಳಿಗೆ 'ಅದಾನ್' ಕೊಡುವವರು ಯಾರನ್ನು ಕರೆಯುತ್ತಿದ್ದಾರೆ ಮತ್ತು ಯಾಕೆ ಕರೆಯುತ್ತಿದ್ದಾರೆ ಎಂಬ ಪ್ರಜ್ಞೆಯೂ

ಮೂಡುವುದಿಲ್ಲ. ಅಂತಹವರನ್ನು ಮುಸ್ಲಿಮರೆಂದೇ ಭಾವಿಸಲಾಗುತ್ತದೆ. ನಮಾಝ್‌ಗೆ ಯಾವುದೇ ಮಹತ್ವವಿಲ್ಲ ಎಂಬ ಭಾವನೆ ಇಂದು ಸಾಮಾನ್ಯವಾಗಿ ಬಿಟ್ಟಿದೆ. ಅದರ ಹೊರತೂ ವ್ಯಕ್ತಿ ಮುಸ್ಲಿಮನಾಗಬಹುದು ಮಾತ್ರವಲ್ಲ ಮುಸ್ಲಿಮರ ಇಮಾಮ್ ಮತ್ತು ನಾಯಕನಾಗಬಹುದು ಎಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಆದರೆ ಇಸ್ಲಾಮ್ ಒಂದು ಆಂದೋಲನದ ರೂಪದಲ್ಲಿ ಜಾಗೃತವಾಗಿದ್ದಾಗ ಈ ಪರಿಸ್ಥಿತಿ ಇರಲಿಲ್ಲ. ಅಧಿಕೃತ ಉಲ್ಲೇಖದಲ್ಲಿ ಹೀಗೆ ಹೇಳಲಾಗಿದೆ:

كان اصحاب النبي صلى الله عليه وسلم لا يرون شيئاً من
الاعمال تركه كفراً غير الصلوٰة ـ

"ಇಸ್ಲಾಮಿನ ಕರ್ಮಗಳ ಪೈಕಿ ನಮಾಝನ್ನು ತೊರೆಯುವುದು ಸತ್ಯನಿಷೇಧಕ್ಕೆ ಸಮಾನ ಎಂಬ ಬಗ್ಗೆ ಪ್ರವಾದಿವರ್ಯರ(ಸ) ಅನುಯಾಯಿಗಳು ಒಮ್ಮತಾಭಿಪ್ರಾಯ ಹೊಂದಿದ್ದರು".

(ತಿರ್ಮಿದಿ)

## ಚಾರಿತ್ರ್ಯ ನಿರ್ಮಾಣ

ಮೂರನೆಯದಾಗಿ ನಮಾಝ್, ಇಸ್ಲಾಮೀ ಜೀವನ ಸಾಗಿಸಲು ಅಥವಾ ಜೀವನವನ್ನು ಸಂಪೂರ್ಣವಾಗಿ ದೇವನ 'ದಾಸ್ಯೋಪಾಸನೆ'ಯನ್ನಾಗಿ ಮಾಡಲು ಅವಶ್ಯಕವಾದ ವಿಶಿಷ್ಟ ಶೈಲಿಯಲ್ಲಿ ವ್ಯಕ್ತಿಯ ಚಾರಿತ್ರ್ಯ ನಿರ್ಮಾಣ ಮಾಡುತ್ತದೆ.

ಯಾವುದೇ ಸಂಘಟನೆಯ ಮುಂದೆ ಯಾವ ರೀತಿಯ ಕೆಲಸಗಳಿರುತ್ತದೋ ಮತ್ತು ಯಾವ ಉದ್ದೇಶಗಳನ್ನು ಅದು ಹೊಂದಿರುತ್ತದೋ ಅದಕ್ಕೆ ಅನುಸಾರವಾದ ತರಬೇತಿ ವ್ಯವಸ್ಥೆಯನ್ನು ರೂಪಿಸಲಾಗುತ್ತದೆ. ಇದನ್ನು ನೀವು ಲೋಕದೆಲ್ಲೆಡೆಯೂ ಕಾಣಬಹುದು. ಉದಾಹರಣೆಗೆ ರಾಷ್ಟ್ರಗಳ ಪೌರಸೇವಾ ವಿಭಾಗದ ಉದ್ದೇಶ ನಿಷ್ಠೆಯೊಂದಿಗೆ ರಾಷ್ಟ್ರದ ವ್ಯವಸ್ಥೆಯನ್ನು ಕಾಯ್ದಿರಿಸುವುದಾಗಿದೆ. ಆದ್ದರಿಂದ ಪೌರಸೇವಾ ತರಬೇತಿಯಲ್ಲಿ ಅಧಿಕಾರದಲ್ಲಿರುವ ಸರ್ಕಾರದ ಬಗ್ಗೆ ನಿಷ್ಠೆ ಬೆಳೆಸಲು ಮತ್ತು ರಾಷ್ಟ್ರದ ಆಡಳಿತ ನಿರ್ವಹಣೆಯ ಪ್ರತಿಭೆಗಳನ್ನು ಬೆಳೆಸಲು ಪೂರ್ಣ ಒತ್ತು ಕೊಡಲಾಗುತ್ತದೆ. ದೇವಭಯ ಮತ್ತು ಪರಿಶುದ್ಧತೆಯ ಪ್ರಶ್ನೆಯೇ ಅಲ್ಲಿ ಉದ್ಭವಿಸುವುದಿಲ್ಲ. ವೈಯಕ್ತಿಕ ಜೀವನ ಎಷ್ಟು ಹೊಲಸಾಗಿದ್ದರೂ ವ್ಯಕ್ತಿ ಪೌರ ಸೇವೆಯಲ್ಲಿ ಪ್ರವೇಶ ಪಡೆಯಬಹುದು, ಪ್ರಗತಿ ಹೊಂದಬಹುದು. ಏಕೆಂದರೆ ಸರ್ಕಾರದಲ್ಲಿ ಸನ್ಮಾರ್ಗ ಮತ್ತು ಸತ್ಯದ ತತ್ವಗಳನ್ನು ಪಾಲಿಸುವ ಮತ್ತು ನೈತಿಕತೆಯನ್ನು ರಾಜಕೀಯದ ಆಧಾರವನ್ನಾಗಿ ಮಾಡುವ ಅವಶ್ಯಕತೆ ತೀರಾ ಇಲ್ಲ. ಹಾಗೆಯೇ ಸೇನೆಯನ್ನು ಸಂಘಟಿಸುವುದರ ಉದ್ದೇಶ ಯುದ್ಧದ ಸಾಮರ್ಥ್ಯವನ್ನು ಬೆಳೆಸುವುದಾಗಿದೆ. ಆದ್ದರಿಂದ ಸಂಘರ್ಷಕ್ಕೆ ಸದಾ ಸಿದ್ಧನಾಗಿರಲಿಕ್ಕಾಗಿ ಸೈನಿಕರನ್ನು ತರಬೇತುಗೊಳಿಸಲಾಗುತ್ತದೆ. ಅವರು ಸುವ್ಯವಸ್ಥಿತವಾಗಿ ಕೆಲಸ ಮಾಡುವಂತಾಗಲು ಅವರ ಪಥಸಂಚಲ ನಡೆಸಲಾಗುತ್ತದೆ. ಸಂಘರ್ಷ ಮತ್ತು ರಕ್ತಪಾತದ ಕಲೆಯಲ್ಲಿ ನಿಷ್ಣಾತರಾಗಲಿಕ್ಕಾಗಿ ಅವರಿಗೆ ಆಯುಧಗಳ ಉಪಯೋಗವನ್ನು ಕಲಿಸಲಾಗುತ್ತದೆ. ಅವರನ್ನು ಉತ್ತಮ ಅನುಸರಣಶೀಲರನ್ನಾಗಿ ಮಾಡಲಾಗುತ್ತದೆ. ಆ ಮೂಲಕ ಸರ್ಕಾರ

ಯಾವುದೇ ಪ್ರದೇಶದಲ್ಲಿ, ಯಾವ ಉದ್ದೇಶಕ್ಕೆ ಬೇಕಾದರೂ ಅವರ ಜಂಘಾ ಬಲವನ್ನು ಉಪಯೋಗಿಸ ಬಯಸಿದರೆ ಅಲ್ಲಿ ಅವರು ಹಿಂಜರಿಕೆಯಿಲ್ಲದೆ ರಂಗಕ್ಕಿಳಿಯಲು ಅವರನ್ನು ಸಿದ್ಧಗೊಳಿಸಲಾಗುತ್ತದೆ. ಅವರ ಮುಂದೆ ಯಾವುದೇ ಉನ್ನತ ನೈತಿಕ ಮಾನದಂಡ ಇಲ್ಲದಿರುವುದರಿಂದ ಸೈನಿಕರಲ್ಲಿ ದೇವಭಯವನ್ನುಂಟು ಮಾಡುವ ಬಗ್ಗೆ ಯಾರೂ ಆಲೋಚಿಸುವುದಿಲ್ಲ. ಸೈನಿಕರು ಶಿಸ್ತುಬದ್ಧವಾಗಿರುವುದಷ್ಟೇ ಸರ್ಕಾರದ ಉದ್ದೇಶಸಾಧನೆಗೆ ಸಾಕಾಗಿ ಬಿಡುತ್ತದೆ. ಅನಂತರ ಅವನು ವ್ಯಭಿಚಾರಿ, ಕುಡುಕ, ಸುಳ್ಳಾಡುವವ, ಅಪ್ರಾಮಾಣಿಕ ಮತ್ತು ಅಕ್ರಮಿಯಾಗಿದ್ದರೂ ಸರಿ.

ಇದಕ್ಕೆ ಪ್ರತಿಯಾಗಿ ಇಸ್ಲಾಮ್ ಒಳಿತಿನ ಸಂಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನವನ್ನು ತನ್ನ ಪ್ರಾಥಮಿಕ ಉದ್ದೇಶವನ್ನಾಗಿ ಮಾಡಿಕೊಂಡಿರುವ ಸಮಾಜವನ್ನು ಸೃಷ್ಟಿಸಬಯಸುತ್ತದೆ. ತನ್ನ ರಾಜಕೀಯ, ನ್ಯಾಯಾಲಯ, ವ್ಯಾಪಾರ, ಕೈಗಾರಿಕೆ, ಯುದ್ಧ ಮತ್ತು ಸಂಧಾನ, ಅಂತರ್‍ರಾಷ್ಟ್ರೀಯ ಸಂಬಂಧ ಮತ್ತು ನಾಗರಿಕತೆಯ ಎಲ್ಲ ವಿಭಾಗಗಳಲ್ಲಿ ಈ ಗುಂಪು ಚಾರಿತ್ರ್ಯದ ಶಾಶ್ವತ ಮೌಲ್ಯಗಳ ಪಾಲನೆ ಮಾಡಬೇಕಾಗಿದೆ. ಭೂಮಿಯಲ್ಲಿ ದೇವನ ಕಾನೂನುಗಳ ಸಂಸ್ಥಾಪನೆ ಮಾಡಬೇಕಾಗಿದೆ. ಆದ್ದರಿಂದ ಅದು ತನ್ನ ಕಾರ್ಯಕರ್ತರು, ಸೈನಿಕರು ಮತ್ತು ಅಧಿಕಾರಿಗಳನ್ನು ಬೇರೆಯೇ ತರಬೇತಿ ವ್ಯವಸ್ಥೆಯ ಆಶ್ರಯದಲ್ಲಿ ಸಿದ್ಧಪಡಿಸುತ್ತದೆ. ಈ ವಿಶಿಷ್ಟ ಬಗೆಯ ಸೇವೆಗೆ ಸಂಬಂಧಿಸಿದಂತಹ ಚಾರಿತ್ರ್ಯ ಅವರಲ್ಲಿ ಬೆಳೆಯಬೇಕೆಂಬುದು ಅದರ ಲಕ್ಷ್ಯವಾಗಿರುತ್ತದೆ. ಈ ಚಾರಿತ್ರ್ಯಕ್ಕೆ ಇಸ್ಲಾಮಿನ ಮೂಲಭೂತ ವಿಶ್ವಾಸಗಳೇ ಆಧಾರ. ದೇವಭಯ, ದೇವ ಸಂಪ್ರೀತಿ, ದೇವನ ಬಗೆಯ ಒಲವು, ದೇವ ಸಂಪ್ರೀತಿಯನ್ನೇ ಜೀವನೋದ್ದೇಶವನ್ನಾಗಿ ಮಾಡಿಕೊಳ್ಳುವುದು, ಅವನನ್ನು ನೈಜ ಆಜ್ಞಾಧಿಕಾರಿ ಎಂದು ಭಾವಿಸುವುದು, ಅವನ ಮುಂದೆ ತನಗೆ ಉತ್ತರದಾಯಿತ್ವವಿದೆ ಎಂದು ಭಾವಿಸುವುದು, ಅವನು ಸಕಲ ವಸ್ತುಗಳ ಬಗ್ಗೆಯೂ ಒಂದು ದಿನ ವಿಚಾರಣೆ ನಡೆಸುವನು ಎಂಬ ಪರಿಜ್ಞಾನ ಮುಂತಾದವುಗಳೇ ಇಸ್ಲಾಮಿ ಚಾರಿತ್ರ್ಯಕ್ಕೆ ಆಧಾರವಾಗಿರುವ ಮೂಲಭೂತ ಕಲ್ಪನೆಗಳಾಗಿವೆ.

ದೇವನು ಸದಾ ಎಲ್ಲ ಸ್ಥಿತಿಯಲ್ಲೂ ಅವನನ್ನು ನೋಡುತ್ತಿದ್ದಾನೆ ಎಂಬ ಬಗ್ಗೆ ಅವನಿಗೆ ಪೂರ್ಣ ವಿಶ್ವಾಸವಿರಬೇಕು, ಅಂತೆಯೇ ಅವನೆಲ್ಲಾ ಚಟುವಟಿಕೆಗಳನ್ನು ದೇವನು ಬಲ್ಲನು, ಕತ್ತಲಿನಲ್ಲೂ ಅವನನ್ನು ದೇವನು ನೋಡಬಲ್ಲನು, ಏಕಾಂತತೆಯಲ್ಲಿ ಅವನ ಮನಾಂತರಾಳದಲ್ಲಿ ಅಡಗಿರುವ ಸಂಕಲ್ಪವನ್ನೂ ಅವನು ಅರಿಯುತ್ತಾನೆ. ಅವನ ಮನಸ್ಸಿನಲ್ಲಿ ಉದ್ಭವಿಸುವ ಭಾವನೆ ಮತ್ತು ಇಚ್ಛೆಗಳೂ ಅವನಿಂದ ಮರೆಯಾಗಿಲ್ಲ. ಸಮಸ್ತ ಲೋಕದಿಂದ ಅಡಗಿಕೊಂಡಿರಬಹುದಾದರೂ ದೇವನಿಂದ ಅಡಗಿಕೊಂಡಿರಲು ಸಾಧ್ಯವಿಲ್ಲ. ಲೋಕದ ಶಿಕ್ಷೆಗಳಿಂದೆಲ್ಲಾ ವ್ಯಕ್ತಿ ತನ್ನನ್ನು ರಕ್ಷಿಸಿಕೊಳ್ಳಬಹುದು. ಆದರೆ ದೇವನ ಶಿಕ್ಷೆಯಿಂದ ಪಾರಾಗಲು ಸಾಧ್ಯವಿಲ್ಲ. ಲೋಕದಲ್ಲಿ ಯಾವುದೇ ಒಳಿತು ನಶಿಸಲ್ಪಡಬಹುದು, ಕೊಲವೊಮ್ಮೆ ಒಳಿತಿನ ಪ್ರತಿಫಲ ಕೆಡುಕಿನ ರೂಪದಲ್ಲಿ ಸಿಗಲೂ ಬಹುದು. ಆದರೆ ದೇವನ ಬಳಿ ಹೀಗಾಗಲು ಸಾಧ್ಯವಿಲ್ಲ. ಲೋಕದ ಅನುಗ್ರಹಗಳು ಸೀಮಿತವಾಗಿವೆ. ಆದರೆ ದೇವಾನುಗ್ರಹಗಳು ನಿಸ್ಸೀಮ. ಲೋಕದ ಲಾಭ-ನಷ್ಟಗಳು ನಶ್ವರ ಮತ್ತು ತಾತ್ಕಾಲಿಕವಾಗಿವೆ. ಆದರೆ ದೇವನ ಬಳಿ ಇರುವ

ಲಾಭ-ನಷ್ಟಗಳು ಶಾಶ್ವತ. ಈ ವಿಶ್ವಾಸದ ವಿನಾ ಮುಸ್ಲಿಮನು ಇಸ್ಲಾಮಿನ ಮಾರ್ಗದಲ್ಲಿ ಒಂದು ಹೆಜ್ಜೆಯನ್ನೂ ಇಡಲಾರ. ಈ ವಿಶ್ವಾಸವೇ ದೇವಾದೇಶಗಳ ಪಾಲನೆ ಮತ್ತು ಅವನ ಕಾನೂನುಗಳ ಅನುಸರಣೆಗೆ ವ್ಯಕ್ತಿಯನ್ನು ಸಿದ್ಧಪಡಿಸುತ್ತದೆ. ಈ ವಿಶ್ವಾಸದ ಬಲದಿಂದಲೇ ಜೀವನದ ವ್ಯವಹಾರಗಳಿಗೆ ಸಂಬಂಧಿಸಿದಂತೆ ದೇವನು ಗೊತ್ತುಪಡಿಸಿರುವ ಸಮ್ಮತಾಸಮ್ಮತಗಳ ಮೇರೆಗಳನ್ನು ಪಾಲಿಸಲು ಅವನು ಸ್ಫೂರ್ತಿ ಪಡೆಯುತ್ತಾನೆ. ಈ ವಿಶ್ವಾಸವೇ ಅವನನ್ನು ಸ್ವೇಚ್ಛೆಗಳ ಪಾಲನೆ, ಅಸಿಂಧುವಾದ ಹಿತಾಸಕ್ತಿಗಳು, ಸುಖಲೋಲುಪತೆಗಳ ಆಮಿಷ ಮತ್ತು ಲಾಭದಾಯಕವಾದ ಅನೈತಿಕ ಕೆಲಸಗಳಿಂದ ತಡೆಯುತ್ತದೆ. ವ್ಯಕ್ತಿಯನ್ನು ನ್ಯಾಯ, ಸತ್ಯಸಂಧತೆ, ಸತ್ಯಪ್ರಿಯತೆ, ಸನ್ಮಾರ್ಗಬದ್ಧತೆ ಮತ್ತು ಉನ್ನತಚಾರಿತ್ರ್ಯದ ನೇರ ಮಾರ್ಗದಲ್ಲಿ ಸ್ಥಿರವಾಗಿರಲು ಸಾಧ್ಯಗೊಳಿಸುವ ಶಕ್ತಿ ಈ ವಿಶ್ವಾಸದಲ್ಲಿದೆ. ಲೋಕೋದ್ಧಾರದ ಕಠಿಣ ಕೆಲಸಕ್ಕೆ ಅದು ವ್ಯಕ್ತಿಯನ್ನು ಸನ್ನದ್ಧಗೊಳಿಸುತ್ತದೆ. ಅವಿಶ್ವಾಸಿಯಾದವನು ಆ ಮಾರ್ಗದಲ್ಲಿ ಬರುವ ತೊಡಕು ಮತ್ತು ಜವಾಬ್ದಾರಿಕೆಗಳನ್ನು ಕಲ್ಪಿಸಲಿಕ್ಕೂ ಸಾಧ್ಯವಿಲ್ಲ.

ಈ ವಿಷಯಗಳನ್ನು ಮತ್ತೆ ಮತ್ತೆ ನೆನಪಿಸುವ ಮತ್ತು ಮನೋಗತಗೊಳಿಸುವ ಸಾಧನವೇ ನಮಾಝ್. ನೀವು ಗಮನವಹಿಸಿ ನೋಡಿದರೆ ನಮಾಝ್‌ನ ಸಂಕಲ್ಪ ಮಾಡುವುದರೊಂದಿಗೆ ಇಸ್ಲಾಮೀ ಚಾರಿತ್ರ್ಯ ನಿರ್ಮಾಣದ ಪ್ರಕ್ರಿಯೆ ಆರಂಭಗೊಳ್ಳುತ್ತದೆಂದು ನಿಮಗೆ ವ್ಯಕ್ತವಾಗುತ್ತದೆ. ಅನಂತರ ನಮಾಝಿನ ಪ್ರತಿಯೊಂದು ಚಲನೆ, ಪ್ರತಿಯೊಂದು ಕರ್ಮ, ಪ್ರತಿಯೊಂದು ಉಕ್ತಿಗಳನ್ನು ಹೇಗೆ ಸಂಯೋಜಿಸಲಾಗಿದೆಯೆಂದರೆ ಅದರಿಂದ ವ್ಯಕ್ತಿ ಸ್ವತಃ ಇಸ್ಲಾಮೀ ಚಾರಿತ್ರ್ಯದ ಚೌಕಟ್ಟಿಗೆ ಬದ್ಧನಾಗುತ್ತಾ ಹೋಗುತ್ತಾನೆ.

ಸ್ವಲ್ಪ ಆಲೋಚಿಸಿ ನೋಡಿ. ನಮಾಝಿನ ಸಂಕಲ್ಪ ಮಾಡಿದ ತಕ್ಷಣ ನಾನೇನೂ ಅಶುಚಿಯಾಗಿಲ್ಲವಲ್ಲ ಎಂದು ನೀವು ನಿಮ್ಮ ಅವಲೋಕನ ನಡೆಸಿಕೊಳ್ಳುತ್ತೀರಿ. ಬಟ್ಟೆ ಅಶುದ್ಧವಾಗಿದೆಯೇ? ಅಂಗ ಸ್ನಾನ ಮಾಡಿದ್ದೇನೋ ಇಲ್ಲವೋ? ಎಂದು ಪರಾಮರ್ಶೆ ನಡೆಸುತ್ತೀರಿ. ಈ ಚಿಂತೆ ನಿಮಗೇಕುಂಟಾಗುತ್ತದೆ ಎಂದು ಆಲೋಚಿಸಿ ನೋಡಿ. ನೀವು ಅಶುದ್ಧಾವಸ್ಥೆಯಲ್ಲೇ ನಮಾಝ್ ಮಾಡಲು ನಿಂತುಕೊಂಡರೆ ಅಥವಾ ಅಂಗಸ್ನಾನವಿಲ್ಲದೆ ನಮಾಝಿಗೆ ಅಣಿಯಾದರೆ ನಿಮ್ಮನ್ನು ತಡೆಯುವವರು ಯಾರಿದ್ದಾರೆ? ಯಾರು ನಿಮ್ಮ ಪರಿಸ್ಥಿತಿಯನ್ನು ಬಲ್ಲವರಿದ್ದಾರೆ? ಆದರೂ ನೀವು ಹಾಗೆ ಮಾಡುವುದಿಲ್ಲವೇಕೆ? ಇದಕ್ಕೆ ನಿಮ್ಮಲ್ಲಿ ದೇವಭಯವಿರುವುದೊಂದೇ ಕಾರಣ. ದೇವನಿಂದ ಯಾವ ವಸ್ತುಗಳೂ ಮರೆಯಾಗಿಲ್ಲವೆಂಬ ಬಗ್ಗೆ ನಿಮಗೆ ಪೂರ್ಣ ವಿಶ್ವಾಸವಿದೆ. ಹಾಗೆಯೇ ಪರಲೋಕದಲ್ಲಿ ನಿಮ್ಮ ಕರ್ಮಗಳಿಗೆ ಉತ್ತರ ಕೊಡಬೇಕೆಂದೂ ನಿಮಗೆ ವಿಶ್ವಾಸವಿದೆ. ಈ ವಸ್ತುಸ್ಥಿತಿಯೇ ಪರಿಶುದ್ಧತೆ, ಅಂಗ ಸ್ನಾನ ಇತ್ಯಾದಿ ನಮಾಝಿನ ನಿಬಂಧನೆಗಳ ಪಾಲನೆಗೆ ನಿಮ್ಮನ್ನು ಪ್ರೇರೇಪಿಸುತ್ತದೆ. ಅನ್ಯಥಾ ನಿಮ್ಮನ್ನು ಅದರ ಪಾಲನೆಗೆ ನಿರ್ಬಂಧಿಸುವಂತಹ ಯಾವುದೇ ಲೌಕಿಕ ಶಕ್ತಿಯೂ ಅಸ್ತಿತ್ವದಲ್ಲಿಲ್ಲ.

ಅನಂತರ ನೀವು ನಮಾಝುನ್ನಾರಂಭಿಸುತ್ತೀರಿ. ನಿಲ್ಲುವ, ಕೂರುವ, ಬಾಗುವ, ಸಾಷ್ಟಾಂಗವೆರಗುವ ಎಲ್ಲ ಸ್ಥಿತಿಗಳಲ್ಲೂ ಕುರ್‌ಆನ್‌ನ ಸೂಕ್ತಗಳು ಅಥವಾ ಪ್ರಾರ್ಥನೆ-

ಕೀರ್ತನೆಗಳನ್ನು ಓದಬೇಕಾದ ರೀತಿಯಲ್ಲಿ ಓದಲು ನೀವು ಪ್ರಯತ್ನಿಸುತ್ತೀರಿ. ಈ ಕಟ್ಟು ನಿಟ್ಟನ್ನು ನೀವು ಪಾಲಿಸುವುದರ ಉದ್ದೇಶವೇನು? ಇದೆಲ್ಲವನ್ನೂ ಮನಸ್ಸಿನಲ್ಲೇ ಓದಬೇಕಾಗಿದೆ. ನೀವು ಅದನ್ನು ಓದದಿದ್ದರೆ ಅಥವಾ ಅದರ ಜಾಗದಲ್ಲಿ ಬೇರೇನನ್ನಾದರೂ ಓದಿದರೆ ಇಲ್ಲವೇ ನಿಮ್ಮ ವತಿಯಿಂದ ಏನನ್ನಾದರೂ ಸೇರಿಸಿ ಓದಿದರೆ ನಿಮ್ಮ ಈ ವರ್ತನೆ ಯಾರಿಗೂ ತಿಳಿಯಲು ಸಾಧ್ಯವಿಲ್ಲ. ಹಾಗಿರುವಾಗ ಯಾರ ಭಯ; ಯಾರ ಪರೋಕ್ಷದ ಜ್ಞಾನದ ಬಗೆಗಿನ ವಿಶ್ವಾಸ ಮತ್ತು ಯಾರ ಶಿಕ್ಷೆ-ರಕ್ಷೆಗಳ ಬಗೆಗಿನ ನಂಬಿಕೆ ನಿಮ್ಮನ್ನು ಕರಾರುವಾಕ್ಕಾಗಿ ನಮಾಝ್ ನಿರ್ವಹಿಸಲು ನಿರ್ಬಂಧಿಸುತ್ತದೆ ಹೇಳಿ.

ಬೇರೆ ಬೇರೆ ಹೊತ್ತಿನಲ್ಲಿ ನೀವು ನಮಾಝಿನ ಸಮಯವನ್ನು ಎದುರುಗಾಣುತ್ತೀರಿ. ಆಗ ನೀವು ಕಾಡಿನಲ್ಲಿರಬಹುದು, ರಾತ್ರಿಯ ಕಾರ್ಗತ್ತಲಿನಲ್ಲಿರಬಹುದು, ಮನೆಯ ಏಕಾಂತತೆಯಲ್ಲಿರಬಹುದು, ಕೆಲವೊಮ್ಮೆ ನಿಮ್ಮ ಆಸಕ್ತಿಯ ಮನೋರಂಜನೆಯಲ್ಲಿ ತಲ್ಲೀನವಾಗಿರಬಹುದು, ವ್ಯಾಪಾರ ನಿರತನಾಗಿರಬಹುದು, ಕೆಲವೊಮ್ಮೆ ಹೊದಿಕೆಯಿಂದ ಹೊರಗಿಣುಕಲು ಅನುಮತಿ ನೀಡದಂತಹ ತೀವ್ರ ಚಳಿಯಿರಬಹುದು, ಕೆಲವೊಮ್ಮೆ ಮನೆಯಿಂದ ಕಾಲು ಹೊರಗಿಟ್ಟರೆ ಭಸ್ಮಗೊಳಿಸಿಬಿಡಬಲ್ಲಂತಹ ಸುಡು ಬಿಸಿಲಿರಬಹುದು. ಒಟ್ಟಿನಲ್ಲಿ ಇಂತಹ ಅನೇಕ ಅವಸ್ಥೆಗಳು ದಿನರಾತ್ರಿಗಳ ವೇಳೆ ಎದುರಾಗುತ್ತಿರುತ್ತದೆ. ಇಂತಹ ಎಲ್ಲ ಪರಿಸ್ಥಿತಿಗಳಲ್ಲಿ ಯಾವ ಶಕ್ತಿ ನಿಮ್ಮನ್ನು ನಮಾಝಿನೆಡೆಗೆ ಎಳೆದು ತರುತ್ತದೆ. ಅದಕ್ಕೆ ಕಾರಣ ದೇವವಿಶ್ವಾಸ, ಅವನು ಸರ್ವಜ್ಞ ಮತ್ತು ಸರ್ವಶ್ರುತನೆಂಬ ನಂಬಿಕೆ, ಅವನ ಪ್ರಕೋಪದ ಬಗ್ಗೆ ಭಯ ಮತ್ತು ದೇವಸಂಪ್ರೀತಿಯ ಬಯಕೆಗಳಲ್ಲದೆ ಬೇರಾವುದೂ ಅಲ್ಲ. ಈ ಎಲ್ಲಾ ಕಲ್ಪನೆಗಳು ನಿಮ್ಮ ಬಾಹ್ಯ ಪ್ರಜ್ಞೆಯಲ್ಲಿ ಜಾಗೃತವಾಗಿರಬೇಕಾಗಿಲ್ಲ. ಚಾರಿತ್ರ್ಯದ ಉಗಮ ನಿಜವಾಗಿ ಅಂತಃ ಪ್ರಜ್ಞೆಯಲ್ಲಿ ಸುಪ್ತವಾಗಿರುವ ಕಲ್ಪನೆಗಳಿಂದಾಗಿ ಮೂಡುತ್ತದೆ, ಅಂತಃ ಪ್ರಜ್ಞೆಯಲ್ಲಿ ಲೀನವಾಗುವ ಕಲ್ಪನೆಗಳೇ ನಿಜವಾಗಿ ಸುದೃಢವಾಗಿರುತ್ತವೆ ಮತ್ತು ಅವುಗಳಿಂದಲೇ ಶಾಶ್ವತ ಗುಣ ಮತ್ತು ಸ್ವಭಾವಗಳು ಹುಟ್ಟುತ್ತವೆ.

ಇನ್ನು ನಮಾಝಿನಲ್ಲಿ ಓದಲಾಗುವ ವಿಷಯಗಳನ್ನು ಗಮನಿಸಿ. ಅದರಲ್ಲಿ ಆದಿಯಿಂದ ಅಂತ್ಯದ ತನಕ ಪಠಿಸಲಾಗುವ ಒಂದೊಂದು ಪದ ಇಸ್ಲಾಮಿನ ಮೂಲಭೂತ ಕಲ್ಪನೆ ಮತ್ತು ಸ್ಫೂರ್ತಿಯಿಂದ ಸಂಪನ್ನವಾಗಿವೆ. ಈ ವಿಷಯಗಳನ್ನು ಹಲವು ಬಾರಿ ಪಠಿಸುವುದರಿಂದ ಇಸ್ಲಾಮಿ ಚಾರಿತ್ರ್ಯದ ಕಟ್ಟಡವನ್ನು ನೆಲೆನಿಲ್ಲಿಸಲಾಗಿರುವ ವಿಶ್ವಾಸಗಳು ಪುನಃ ಪುನಃ ನವೀಕರಿಸಲ್ಪಡುತ್ತದೆ ಮತ್ತು ಮಂದಟ್ಟಾಗುತ್ತದೆ.

ಮೊದಲು ಅದಾನನ್ನು ತೆಗೆದುಕೊಳ್ಳಿ. ದಿನದ ಐದು ಹೊತ್ತು ನಿಮಗೆ ನಮಾಝಿನ ಬಗ್ಗೆ ಸೂಚನೆ ನೀಡಲಾಗುತ್ತದೆ-

اَللهُ اَكْبَرُ اَللهُ اَكْبَرُ

"ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್"

ಅಲ್ಲಾಹನು ಮಹಾನನು, ಅಲ್ಲಾಹನು ಮಹಾನನು.

اَشْهَدُ اَنْ لَّا اِلٰـهَ اِلَّا اللّٰهُ

"ಅಶ್ಹದು ಅಲ್ಲಾಇಲಾಹ ಇಲ್ಲಲ್ಲಾಹ್"

ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ. ದಾಸ್ಯ ಕೈಗೊಳ್ಳಲು ಅರ್ಹರಾದವರು ಬೇರಾರೂ ಇಲ್ಲವೆಂದು ನಾನು ಸಾಕ್ಷ್ಯ ನುಡಿಯುತ್ತೇನೆ.

اَشْهَدُ اَنَّ مُحَمَّدًا رَّسُوْلُ اللّٰهِ

"ಅಶ್ಹದು ಅನ್ನ ಮುಹಮ್ಮದ ರ್ರಸೂಲುಲ್ಲಾಹ್"

ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯಾಗಿದ್ದಾರೆ ಎಂದು ನಾನು ಸಾಕ್ಷ್ಯ ನುಡಿಯುತ್ತೇನೆ.

حَيَّ عَلَى الصَّلٰوةِ

"ಹಯ್ಯ ಅಲಸ್ಸಲಾತ್"

ನಮಾಝಿನೆಡೆಗೆ ಬನ್ನಿ.

حَيَّ عَلَى الْفَلَاحِ

"ಹಯ್ಯ ಅಲಲ್ ಫಲಾಹ್"

ಕಲ್ಯಾಣಪ್ರದ ಮತ್ತು ಪ್ರಗತಿಪರ ಕಾರ್ಯದೆಡೆಗೆ ಬನ್ನಿ.

اَللّٰهُ اَكْبَرُ اَللّٰهُ اَكْبَرُ

"ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್"

ಅಲ್ಲಾಹನು ಮಹಾನನು. ಅಲ್ಲಾಹನು ಮಹಾನನು.

لَا اِلٰـهَ اِلَّا اللّٰهُ

"ಲಾ ಇಲಾಹ ಇಲ್ಲಲ್ಲಾಹ್"

ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ.

ಇದು ಎಷ್ಟು ಪ್ರಬಲವಾದ ಕರೆಯಾಗಿದೆ ಎಂದು ಗಮನಿಸಿ- ಭೂಮಿಯಲ್ಲಿ ದೇವತ್ವದ ಬಗ್ಗೆ ವಾದಿಸುತ್ತಾ ತಿರುಗುವವರೆಲ್ಲರೂ ವಂಚಕರು ಎಂದು ದಿನದ ಐದು ಹೊತ್ತು ಅದು ನಿಮಗೆ ನೆನಪಿಸುತ್ತದೆ. ಭೂಮಿ-ಆಕಾಶಗಳಲ್ಲಿ ಮಹಾನತೆ ಇರುವವನು ಒಬ್ಬನು ಮಾತ್ರ. ಅವನು ಮಾತ್ರ ಆರಾಧನೆಗೆ ಅರ್ಹನು. ಬನ್ನಿ ಅವನ ದಾಸ್ಯೋಪಾಸನೆ ಕೈಗೊಳ್ಳಿ. ಅವನ ದಾಸ್ಯೋಪಾಸನೆಯಲ್ಲೇ ನಿಮ್ಮ ಇಹ-ಪರ ವಿಜಯ ಅಡಕವಾಗಿದೆ. ಈ ಕರೆಯನ್ನು ಕೇಳಿ ಪ್ರಭಾವಿತರಾಗದವರು ಯಾರಿದ್ದಾರೆ? ಒಬ್ಬ ವ್ಯಕ್ತಿಯ ಹೃದಯದಲ್ಲಿ ಸತ್ಯವಿಶ್ವಾಸವಿದ್ದರೆ ಇಷ್ಟು ದೊಡ್ಡ ಸಾಕ್ಷ್ಯ ಮತ್ತು ಇಂತಹ ಪ್ರಬಲ ಕರೆಯನ್ನು ಕೇಳಿಯೂ, ತನ್ನ ಪ್ರಭುವಿನ ಮುಂದೆ ಶಿರಬಾಗಿಸಲು ಧಾವಿಸದೆ ತನ್ನ ಜಾಗದಲ್ಲಿ ಕುಳಿತಿರಲು ಸಾಧ್ಯವೇ?

ಅನಂತರ ನೀವು ನಮಾಝ್ ನಿರ್ವಹಿಸಲು ನಿಂತುಕೊಳ್ಳುತ್ತೀರಿ. ನಿಮ್ಮ ಮುಖ ಕಿಬ್ಲಾಭಿಮುಖವಾಗಿದೆ. ನೀವು ಶುಚಿಯಾಗಿ ಜಗದೊಡೆಯನ ಸನ್ನಿಧಿಯಲ್ಲಿ ಹಾಜರಾಗುತ್ತೀರಿ.

ಮೊದಲು ಕೈಗಳನ್ನು ಕಿವಿಯ ತನಕ ಮೇಲೆತ್ತುತ್ತೀರಿ ಮತ್ತು ಸರ್ವಲೋಕ ಹಾಗೂ ಅದರೊಳಗೊಂಡಿರುವ ಸಕಲ ವಸ್ತುಗಳಿಂದ ಮುಕ್ತನಾಗಿರುವುದನ್ನು ಪ್ರಕಟಿಸುತ್ತೀರಿ. [1]

ಅನಂತರ اَللّٰهُ اَكْبَرُ 'ಅಲ್ಲಾಹು ಅಕ್ಬರ್' ಎಂದು ಹೇಳಿ ಕೈ ಕಟ್ಟುತ್ತೀರಿ [2]

ಹೀಗೆ ನೀವು ನಿಮ್ಮ ಪ್ರಭುವಿನ ಮುಂದೆ ಗೌರವಾರ್ಹದಿಂದ ಕೈಕಟ್ಟಿ ನಿಂತಿದ್ದೀರಿ. ಇನ್ನು ನಿಮ್ಮ ನಾಲಗೆಯಿಂದ ಈ ಪದಗಳು ಹೊರಡುತ್ತವೆ-

اِنِّىْ وَجَّهْتُ وَجْهِىَ لِلَّذِىْ فَطَرَ السَّمٰوٰتِ وَالْاَرْضَ
حَنِيْفًا وَّمَآ اَنَا مِنَ الْمُشْرِكِيْنَ۔

"ಇನ್ನೀ ವಜ್ಜಹ್ತು ವಜ್‌ಹಿಯ ಲಿಲ್ಲದೀ ಫತರಸ್ಸಮಾವಾತಿ ವಲ್‌ಅರ್ದ ಹನೀಫನ್ ವಮಾಅನ ಮಿನಲ್ ಮುಶ್ರಿಕೀನ್"

ನಾನು ಏಕ ನಿಷ್ಠೆಯಿಂದ ನನ್ನ ಮುಖವನ್ನು ಭೂಮಿ-ಆಕಾಶಗಳನ್ನು ಸೃಷ್ಟಿಸಿದವನ ಕಡೆಗೆ ತಿರುಗಿಸಿದೆನು. ನಾನು ಎಷ್ಟು ಮಾತ್ರಕ್ಕೂ ಅಲ್ಲಾಹನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿ ಮಾಡುವವರಲ್ಲಿ ಸೇರಿದವನಲ್ಲ.

ಈ ಸ್ಪಷ್ಟೋಕ್ತಿಯ ಬಳಿಕ ನೀವು ದೇವನೊಡನೆ ಹೀಗೆ ಬೇಡುತ್ತೀರಿ:

سُبْحَانَكَ اللّٰهُمَّ وَبِحَمْدِكَ وَتَبَارَكَ اسْمُكَ وَتَعَالٰى جَدُّكَ
وَلَآ اِلٰهَ غَيْرُكَ ۔ اَعُوْذُ بِاللّٰهِ مِنَ الشَّيْطٰنِ الرَّجِيْمِ۔

"ಸುಬ್ಹಾನಕಲ್ಲಾಹುಮ್ಮ ವಬಿಹಮ್ದಿಕ ವತಬಾರಕಸ್ಮುಕ ವತಆಲಾ ಜದ್ದುಕ ವಲಾ ಇಲಾಹ ಗೈರುಕ. ಅಊದು ಬಿಲ್ಲಾಹಿ ಮಿನಶ್ಶೈತಾನಿರ್ರಜೀಮ್"

ಪರಮಪಾವನ[3] ನಾಗಿರುವೆ ನೀನು ಓ ದೇವನೇ! ಸ್ತುತಿ ಸ್ತೋತ್ರಗಳು ನಿನಗೇ ಮೀಸಲು

---

*1. ಕೈ ಎತ್ತುವುದು ನಿಜವಾಗಿ ಎರಡು ವಸ್ತುಗಳನ್ನು ಸೂಚಿಸುತ್ತದೆ. ಮೊದಲನೆಯದು ಶರಣಾಗತಿ. ಪ್ರತಿರೋಧವನ್ನು ತೊರೆದು ತನ್ನನ್ನು ಒಪ್ಪಿಸಿ ಬಿಡುವುದು. ಎರಡನೆಯದಾಗಿ ಮುಕ್ತನಾಗುವುದು. ಅರ್ಥಾತ್ ಯಾವುದರೊಂದಿಗೆ ವ್ಯಕ್ತಿ ಈ ತನಕ ಸಂಬಂಧ ಹೊಂದಿದ್ದನೋ ಅದೆಲ್ಲದರಿಂದ ಅವನು ಮುಕ್ತನಾದನು.*

*2. ಯಾರ ಮುಂದಾದರೂ ಕೈ ಕಟ್ಟಿ ನಿಂತುಕೊಳ್ಳುವುದು ಅತ್ಯಂತ ಗೌರವಾದರ ಮತ್ತು ದಾಸ್ಯಾನುಸರಣೆಯ ಪ್ರಕಟಣೆಯಾಗಿದೆ. ಆದ್ದರಿಂದಲೇ ಪುರಾತನ ಕಾಲದಿಂದ ರಾಜರುಗಳು ತಮ್ಮ ಆಸ್ಥಾನದ ಶಿಷ್ಟಾಚಾರಗಳಲ್ಲಿ ಅದನ್ನು ಸೇರಿಸಿದ್ದಾರೆ. ಆದರೆ ಇಸ್ಲಾಮ್ ಅದನ್ನು ದೇವನ ಸನ್ನಿಧಿಯಲ್ಲಿ ಹಾಜರಾಗುವುದಕ್ಕೆ ಮಾತ್ರ ಸೀಮಿತಗೊಳಿಸಿದೆ.*

*3. ಪರಮ ಪಾವನನೆಂದರೆ ಸರ್ವ ವಿಧ ದೋಷ, ದೌರ್ಬಲ್ಯ, ಹುಳುಕು ಮತ್ತು ತಪ್ಪುಗಳಿಂದ ಮುಕ್ತನಾದವನು. 'ಸ್ತುತಿ ಸ್ತೋತ್ರಗಳು ಅವನಿಗೇ ಮೀಸಲು' ಎಂದರೆ ಸಕಲ ವಿಧ ನೈಪುಣ್ಯತೆ ಮತ್ತು ವಿಶೇಷತೆಗಳನ್ನು ಹೊಂದಿರುವವನು ನೀನೇ.*

ನಿನ್ನ ನಾಮ ಸಮೃದ್ಧವಾಗಿದೆ. ನಿನ್ನ ಹಿರಿಮೆ ಅತ್ಯುನ್ನತವಾಗಿದೆ. ನಿನ್ನ ಹೊರತು ಬೇರಾರೂ ಆರಾಧ್ಯರಿಲ್ಲ. 'ಶಪಿತ ಶೈತಾನನ ದುಷ್ಪ್ರೇರಣೆಯಿಂದ ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ.

بِسْمِ اللهِ الرَّحْمٰنِ الرَّحِيْمِ -

"ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್"

ಪರಮ ದಯಾಮಯನೂ ಕರುಣಾ ನಿಧಿಯೂ ಆದ ಅಲ್ಲಾಹನ ನಾಮದಿಂದ ಆರಂಭಿಸುತ್ತೇನೆ.

اَلْحَمْدُ لِلّٰهِ رَبِّ الْعٰلَمِيْنَ -

"ಅಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್"

ಸರ್ವಲೋಕಗಳ ಒಡೆಯನಾದ ಅಲ್ಲಾಹನಿಗೆ ಸರ್ವಸ್ತುತಿ.

اَلرَّحْمٰنِ الرَّحِيْمِ

"ಅರ್ರಹ್ಮಾನಿರ್ರಹೀಮ್"

ಪರಮ ದಯಾಳು ಕರುಣಾನಿಧಿ

مٰلِكِ يَوْمِ الدِّيْنِ

"ಮಾಲಿಕಿ ಯೌಮಿದ್ದೀನ್"

ನಿರ್ಣಾಯಕ ದಿನದ ಅಧಿಪತಿ

اِيَّاكَ نَعْبُدُ وَ اِيَّاكَ نَسْتَعِيْنُ -

"ಇಯ್ಯಾಕ ನಅ್‌ಬುದು ವಇಯ್ಯಾಕ ನಸ್ತಈನ್"

ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಯಾಚಿಸುತ್ತೇವೆ.

اِهْدِنَا الصِّرَاطَ الْمُسْتَقِيْمَ

"ಇಹ್‌ದಿನಸ್ಸಿರಾತಲ್ ಮುಸ್ತಕೀಮ್"

ನಮಗೆ ಸನ್ಮಾರ್ಗವನ್ನು ದಯಪಾಲಿಸು

صِرَاطَ الَّذِيْنَ اَنْعَمْتَ عَلَيْهِمْ -

"ಸಿರಾತಲ್ಲದೀನ ಅನ್‌ಅಮ್ತ ಅಲೈಹಿಮ್"

ನೀನು ಅನುಗ್ರಹಿಸಿದವರ ಮಾರ್ಗ

غَيْرِ الْمَغْضُوْبِ عَلَيْهِمْ

"ಗೈರಿಲ್ ಮಗ್ಳೂಬಿ ಅಲೈಹಿಮ್"

ನಿನ್ನ ಕ್ರೋಧಕ್ಕೆ ಪಾತ್ರರಾದವರ ಮಾರ್ಗವಲ್ಲ

وَلَا الضَّآلِّيْنَ -

"ವಲದ್ದಾಲ್ಲೀನ್"

ನಿನ್ನ ದಾರಿಯನ್ನು ತಪ್ಪಿ ನಡೆದವರ ಮಾರ್ಗವೂ ಅಲ್ಲ.

آمين : 'ಆಮೀನ್'.

ಹಾಗೆಯೇ ಆಗಲಿ. ದೇವಾ ನಮ್ಮ ಪ್ರಾರ್ಥನೆಯನ್ನು ಸ್ವೀಕರಿಸು.

ಅನಂತರ ನೀವು ಕುರ್‌ಆನ್‌ನ ಕೆಲವು ಸೂಕ್ತಗಳನ್ನು ಪಠಿಸುತ್ತೀರಿ. ಆ ಪೈಕಿ ಪ್ರತಿಯೊಂದರಲ್ಲಿ ಇಸ್ಲಾಮಿನ ಮೂಲಭೂತ ತತ್ವ, ನೈತಿಕ ಬೋಧನೆಗಳು, ಪ್ರಾಯೋಗಿಕ ಮಾರ್ಗದರ್ಶನ ಇತ್ಯಾದಿಗಳನ್ನು ನೀಡಲಾಗಿದೆ. ನೀವು ಯಾವ ಸನ್ಮಾರ್ಗವನ್ನು ಯಾಚಿಸಿದ್ದೀರೋ ಆ ಮಾರ್ಗದ ಲಕ್ಷಣಗಳನ್ನು ಅದರಲ್ಲಿ ಸೂಚಿಸಲಾಗಿದೆ, ಉದಾಹರಣೆಗೆ:

وَالْعَصْرِ إِنَّ الْإِنْسَانَ لَفِي خُسْرٍ -

"ವಲ್ ಅಸ್ರ್ ಇನ್ನಲ್ ಇನ್‌ಸಾನ ಲಫೀ ಕುಸ್ರ್"

ಕಾಲದಾಣೆ. ನಿಜವಾಗಿ ಮನುಷ್ಯನು ಮಹಾನಷ್ಟದಲ್ಲಿದ್ದಾನೆ.

إِلَّا الَّذِينَ آمَنُوا وَعَمِلُوا الصَّالِحَاتِ -

"ಇಲ್ಲಲ್ಲದೀನ ಆಮನೂ ಪ ಅಮಿಲುಸ್ಸಾಲಿಹಾತ್"

ಸತ್ಯವಿಶ್ವಾಸ ಸ್ವೀಕರಿಸಿದ ಸತ್ಕರ್ಮ ಮಾಡುತ್ತಿದ್ದ

وَتَوَاصَوْا بِالْحَقِّ وَتَوَاصَوْا بِالصَّبْرِ -

"ವತವಾಸೌ ಬಿಲ್‌ಹಕ್ಕಿ ವತವಾಸೌಬಿಸ್ಸಬ್ರ್"

ಮತ್ತು ಪರಸ್ಪರ ಸತ್ಯ ಮತ್ತು ಸಹನೆಯನ್ನು ಉಪದೇಶಿಸುತ್ತಿದ್ದವರ ಹೊರತು.

ಈ ಸಂಕ್ಷಿಪ್ತ ಉದ್ಧರಣೆಯಲ್ಲಿ ಮಾನವರನ್ನುದ್ದೇಶಿಸಿ ಹೀಗೆನ್ನಲಾಗಿದೆ- ನಿನಗೆ ದೇವಭಯ ಮತ್ತು ಸತ್ಕರ್ಮವನ್ನು ಅನುಸರಿಸುವ ತನಕ ವಿನಾಶ ಮತ್ತು ಪತನದಿಂದ ಮುಕ್ತವಾಗಲು ಸಾಧ್ಯವಿಲ್ಲ. ಕೇವಲ ವೈಯಕ್ತಿಕ ಒಳಿತು ಈ ನಿಟ್ಟಿನಲ್ಲಿ ಸಾಕಾಗಲಾರದು. ಬದಲಾಗಿ ನಿನ್ನ ಒಳಿತಿಗೆ ನೀನಿರುವ ಸಮಾಜದಲ್ಲೂ ಸತ್ಯಸಂಧತೆಯ ಸ್ಫೂರ್ತಿ ನೆಲೆನಿಂತಿರುವುದು ಅತ್ಯವಶ್ಯಕವಾಗಿದೆ. ಇದಕ್ಕೆ ಮಾನವೇತಿಹಾಸವೇ ಸಾಕ್ಷಿಯಾಗಿದೆ.

ಇನ್ನೊಂದು ಉದಾಹರಣೆ:

أَرَأَيْتَ الَّذِي يُكَذِّبُ بِالدِّينِ -

"ಅರಐತಲ್ಲದೀ ಯುಕದ್ದಿಬು ಬಿದ್ದೀನ್"

ನೀವು ಕಂಡಿರಾ ಪರಲೋಕದ ಕರ್ಮಫಲಗಳನ್ನು ನಿರಾಕರಿಸುವವರನ್ನು

فَذَٰلِكَ الَّذِي يَدُعُّ الْيَتِيمَ

"ಫದಾಲಿಕಲ್ಲದೀ ಯದುಉ್ಉಲ್ ಯತೀಮ್"

ಅವನೇ ತಾನೆ ಅನಾಥನನ್ನು ದೂರದಬ್ಬುವವನು

وَلَا يَحُضُّ عَلَىٰ طَعَامِ الْمِسْكِينِ

"ವಲಾ ಯಹುದ್ದು ಅಲಾ ತಆಮಿಲ್ ಮಿಸ್ಕೀನ್"

ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು

فَوَيْلٌ لِّلْمُصَلِّينَ

"ಫವೈಲುಲ್ಲಿಲ್ ಮುಸಲ್ಲೀನ್"

ಮತ್ತು ವಿನಾಶಕಾದಿದೆ ಆ ನಮಾಝ್ ನಿರ್ವಹಿಸುವವರಿಗೆ

الَّذِينَ هُمْ عَن صَلَاتِهِمْ سَاهُونَ

"ಅಲ್ಲದೀನಹುಮ್ ಅನ್‌ಸಲಾತಿಹಿಮ್ ಸಾಹೂನ್"

ಅವರು ತಮ್ಮ ನಮಾಝಿನ ಬಗ್ಗೆ ಅನಾಸ್ಥೆ ತೋರುತ್ತಾರೆ.

الَّذِينَ هُمْ يُرَاءُونَ وَيَمْنَعُونَ الْمَاعُونَ

"ಅಲ್ಲದೀನಹುಮ್ ಯುರಾಊನ ವಯಮ್‌ನ ಊನಲ್ ಮಾವೂನ್"

ಅವರು ತೋರಿಕೆಯ ಕೆಲಸ ಮಾಡುತ್ತಾರೆ ಮತ್ತು (ಜನರಿಗೆ)

ಸಾಮಾನ್ಯ ಅವಶ್ಯಕ ವಸ್ತುಗಳನ್ನೂ ಕೊಡುವುದಕ್ಕೆ ಹಿಂಜರಿಯುತ್ತಾರೆ.

ಈ ಪುಟ್ಟ ಮತ್ತು ಪರಿಣಾಮಕಾರಿ ವಾಕ್ಯಗಳ ಮೂಲಕ ಪರಲೋಕ ವಿಶ್ವಾಸ ಮಾನವನ ನೈತಿಕ ಜೀವನದ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂಬುದನ್ನು ಮಂದಟ್ಟು ಮಾಡಿಸಲಾಗಿದೆ. ಹಾಗೆಯೇ ಈ ವಿಶ್ವಾಸ ಇಲ್ಲದಿದ್ದರೆ ವ್ಯಕ್ತಿಯ ಸಾಮೂಹಿಕ ವ್ಯವಹಾರ ಮತ್ತು ವೈಯಕ್ತಿಕ ಧೋರಣೆ ಹೇಗೆ ಪ್ರಾಮಾಣಿಕತೆ ಮತ್ತು ನಿಷ್ಪೃಹತೆಯಿಂದ ಮುಕ್ತವಾಗುತ್ತದೆ ಎಂದೂ ತಿಳಿ ಹೇಳಲಾಗಿದೆ.

ಮತ್ತೊಂದು ಉದಾಹರಣೆ:

وَيْلٌ لِّكُلِّ هُمَزَةٍ لُّمَزَةٍ

"ವೈಲುಲ್ಲಿಕುಲ್ಲಿ ಹುಮಝ್ಝತಿಲ್ಲುಮಝ್ಝಃ"

(ಎದುರೆದುರೇ) ಜನರನ್ನು ಮೂದಲಿಸುವ ಮತ್ತು (ಬೆನ್ನಹಿಂದೆ) ದೂಷಿಸುವ ಅಭ್ಯಾಸವಿರುವ ಪ್ರತಿಯೊಬ್ಬನಿಗೂ ವಿನಾಶವಿದೆ.

الَّذِي جَمَعَ مَالًا وَعَدَّدَهُ

"ಅಲ್ಲದೀ ಜಮಅ ಮಾಲನ್ ವಅದ್ದದಃ"

ಅವನು ಸಂಪತ್ತನ್ನು ಸಂಗ್ರಹಿಸಿದನು ಮತ್ತು ಅದನ್ನು ಎಣಿಸಿ ಎಣಿಸಿ ಇಟ್ಟನು.

يَحْسَبُ أَنَّ مَالَهُ أَخْلَدَهُ

"ಯಹ್‌ಸಬು ಅನ್ನ ಮಾಲಹೂ ಅಖ್‌ಲದಃ"

ಅವನು ಸಂಪತ್ತು ಶಾಶ್ವತವಾಗಿ ಅವನ ಬಳಿಯಲ್ಲೇ ಇರುವುದೆಂದು ಭಾವಿಸುತ್ತಾನೆ.

كَلَّا لَيُنبَذَنَّ فِي الْحُطَمَةِ

"ಕಲ್ಲಾ ಲಯುಂಬದನ್ನ ಫಿಲ್ ಹುತಮಃ"

ಖಂಡಿತ ಇಲ್ಲ, ಅವನು ಪುಡಿಗಟ್ಟಿ ಬಿಡುವ ಸ್ಥಳಕ್ಕೆ ಎಸೆಯಲ್ಪಡುವನು.

وَمَآ أَدْرٰكَ مَا الْحُطَمَةُ

"ವಮಾ ಅದ್‌ರಾಕ ಮಲ್‌ಹುತಮಃ"

ಪುಡಿಗಟ್ಟಿ ಬಿಡುವ ಆ ಸ್ಥಳ ಏನೆಂದು ನಿಮಗೇನು ಗೊತ್ತು

نَارُ اللّٰهِ الْمُوْقَدَةُ

"ನಾರುಲ್ಲಾಹಿಲ್ ಮೂಕದಃ"

ಚೆನ್ನಾಗಿ ಧಗಧಗಿಸಲ್ಪಟ್ಟಿರುವ ಅಲ್ಲಾಹನ ಬೆಂಕಿ.

الَّتِيْ تَطَّلِعُ عَلَى الْأَفْئِدَةِ

"ಅಲ್ಲತೀ ತತ್ತಲಿಉ ಅಲಲ್ ಅಫ್‌ಇದಃ"

ಅದು ಹೃದಯಗಳ ವರೆಗೂ ತಲಪುವುದು.

إِنَّهَا عَلَيْهِمْ مُّؤْصَدَةٌ

"ಇನ್ನಹಾ ಅಲೈಹಿಮ್ ಮೂಸದಃ"

ಅದನ್ನು ಅವರ ಮೇಲೆ ಆವರಿಸಿ ಮುಚ್ಚಿ ಬಿಡಲಾಗುವುದು.

فِيْ عَمَدٍ مُّمَدَّدَةٍ

"ಫೀ ಅಮದಿನ್ ಮುಮದ್ದದಃ"

ಅವರು ಎತ್ತರವಾದ ಸ್ತಂಭಗಳಲ್ಲಿ (ಸಿಲುಕಿಕೊಂಡಿರುವ ಸ್ಥಿತಿಯಲ್ಲಿ).

ಇವು ಕೇವಲ ಎರಡು ಮೂರು ಉದಾಹರಣೆಗಳಾಗಿವೆ. ಪ್ರತಿಯೊಂದು ನಮಾಝಿನಲ್ಲಿ ಕುರ್‌ಆನ್‌ನ ಯಾವುದಾದರೊಂದು ಭಾಗವನ್ನು ಓದುವುದನ್ನು ಕಡ್ಡಾಯಗೊಳಿಸಲಾಗಿರುವುದರ ಉದ್ದೇಶವೇನೆಂದು ಇದರಿಂದ ನಮಗೆ ವ್ಯಕ್ತವಾಗುತ್ತದೆ. ದಿನದಲ್ಲಿ ಅನೇಕ ಬಾರಿ ದೇವನ ಆದೇಶ ನಿರ್ದೇಶ ಮತ್ತು ಬೋಧನೆಗಳನ್ನು ವ್ಯಕ್ತಿಗೆ ನೆನಪಿಸುತ್ತಿರುವುದೇ ಇದರ ಉದ್ದೇಶ. ಈ ಲೋಕವು ಮಾನವರನ್ನು ಕರ್ಮಗಳನ್ನೆಸಗಲು ಕಳುಹಿಸಲಾಗಿರುವ ಕರ್ಮಭೂಮಿಯಾಗಿದೆ. ಇದು ಸರಿಯಾಗಿ ನಡೆಯಬೇಕಾದರೆ ಮಾನವನನ್ನು ಅವನ ಕೆಲಸಗಳ ನಡುವೆಯೇ ಆಗಾಗ ಸ್ವಲ್ಪ ಹೊತ್ತಿನ ಮಟ್ಟಿಗೆ ಪ್ರತ್ಯೇಕವಾಗಿ ಕರೆಯಬೇಕಾಗಿದೆ. ಇಲ್ಲಿ ಯಾವ ನಿರ್ದೇಶಕ ತತ್ವಗಳ ಆಧಾರದಲ್ಲಿ ಅವನು ಕಾರ್ಯವೆಸಗಬೇಕೋ ಅದರ ಪರಿಚ್ಛೇದಗಳು ಅವನ ನೆನಪಿನಲ್ಲುಳಿಯಲು ಈ ವ್ಯವಸ್ಥೆ ಅನಿವಾರ್ಯವಾಗಿದೆ.

ಈ ಆದೇಶಗಳನ್ನು ಕೇಳಿದ ನಂತರ اللّٰهُ أَكْبَر 'ಅಲ್ಲಾಹು ಅಕ್ಬರ್' ಎನ್ನುತ್ತಾ ನೀವು ಬಾಗುತ್ತೀರಿ. ಮೊಣಕಾಲಿನ ಮೇಲೆ ಕೈಯಿರಿಸಿ ನಿಮ್ಮ ಪ್ರಭುವಿನ ಮುಂದೆ ಬಾಗುತ್ತೀರಿ.*

---

** ಬಾಗುವುದು, ನಮಾಝಿನ ಆರಂಭದಲ್ಲಿ ಕೈಕಟ್ಟುವ ಮೂಲಕ ಆರಂಭಿಸಲಾಗಿದ್ದ ಅನುಸರಣೆ ಮತ್ತು ಅರ್ಪಣಾ ಮನೋಭಾವದ ಇನ್ನೊಂದು ಹಂತವಾಗಿದೆ.*

ಅನಂತರ ಈ ಉಕ್ತಿಗಳನ್ನು ಪುನರಾವರ್ತಿಸುತ್ತೀರಿ.

سُبْحَانَ رَبِّيَ الْعَظِيْم

"ಸುಬ್ಹಾನ ರಬ್ಬಿಯಲ್ ಅಝೀಮ್"

ಮಹಾನನಾದ ನನ್ನ ಪ್ರಭು ಪರಮ ಪಾವನನು

ಅನಂತರ ನೇರವಾಗಿ ನಿಂತು ಹೀಗೆನ್ನುತ್ತೀರಿ:

سَمِعَ اللّٰهُ لِمَنْ حَمِدَهٗ

"ಸಮಿಅಲ್ಲಾಹು ಲಿಮನ್ ಹಮಿದಃ"

ಅಲ್ಲಾಹನು ಸ್ತುತಿಸಿದವನ ಮಾತನ್ನು ಕೇಳಿದನು.

ಅನಂತರ ಪುನಃ اَللّٰهُ اَكْبَرُ 'ಅಲ್ಲಾಹು ಅಕ್ಬರ್' ಎನ್ನುತ್ತಾ ನೀವು ಸಾಷ್ಟಾಂಗವೆರಗುತ್ತೀರಿ* ಮತ್ತು ಈ ಉಕ್ತಿಗಳನ್ನು ಪುನರಾವರ್ತಿಸುತ್ತೀರಿ:

سُبْحَانَ رَبِّيَ الْاَعْلٰى

'ಸುಬ್ಹಾನರಬ್ಬಿಯಲ್ ಅಅ್‌ಲಾ"

ಅತ್ಯುನ್ನತನಾದ ನನ್ನ ಪ್ರಭು ಪರಮ ಪಾವನನು.

ಅನಂತರ, اَللّٰهُ اَكْبَرُ "ಅಲ್ಲಾಹು ಅಕ್ಬರ್" ಎನ್ನುತ್ತಾ ತಲೆಯೆತ್ತುತ್ತೀರಿ. ಗೌರವಾದರಗಳೊಂದಿಗೆ ಕುಳಿತುಕೊಳ್ಳುತ್ತೀರಿ ಮತ್ತು ನಾಲಗೆಯಿಂದ ಈ ಪದಗಳನ್ನು ಹೊರಡಿಸುತ್ತೀರಿ.

اَلتَّحِيَّاتُ لِلّٰهِ وَالصَّلَوَاتُ وَالطَّيِّبَاتُ

"ಅತ್ತಹಿಯ್ಯಾತು ಲಿಲ್ಲಾಹಿ ವಸ್ಸಲವಾತು ವತ್ತಯ್ಯಿಬಾತ್"

ನಮ್ಮ ವಂದನೆಗಳು, ನಮ್ಮ ನಮಾಝ್‌ಗಳು ಮತ್ತು ನಮ್ಮೆಲ್ಲಾ ಸತ್ಕರ್ಮಗಳು ಅಲ್ಲಾಹನಿಗೆ ಮೀಸಲು.

اَلسَّلَامُ عَلَيْكَ اَيُّهَا النَّبِيُّ وَرَحْمَةُ اللّٰهِ وَبَرَكَاتُهٗ

"ಅಸ್ಸಲಾಮು ಅಲೈಕ ಅಯ್ಯುಹನ್ನಬಿಯ್ಯು ವರಹ್ಮತುಲ್ಲಾಹಿ ವಬರಕಾತುಹೂ"

'ಪ್ರವಾದಿವರ್ಯರೇ(ಸ)! ನಿಮಗೆ ಸ್ವಸ್ತಿ ವಚನಗಳಿರಲಿ. ಅಲ್ಲಾಹನ ಕಾರುಣ್ಯ ಮತ್ತು ಸಮೃದ್ಧಿಗಳು ನಿಮ್ಮ ಮೇಲೆ ವರ್ಷಿಸಲಿ.

اَلسَّلَامُ عَلَيْنَا وَعَلٰى عِبَادِ اللّٰهِ الصّٰلِحِيْنَ

'ಅಸ್ಸಲಾಮು ಅಲೈನಾ ವಅಲಾ ಇಬಾದಿಲ್ಲಾಹಿಸ್ಸಾಲಿಹೀನ್"

ನಮ್ಮ ಮೇಲೂ ಅಲ್ಲಾಹನ ಎಲ್ಲ ಸಚ್ಚರಿತ ದಾಸರ ಮೇಲೂ ಶಾಂತಿ ಇರಲಿ.

---

** ಇದು ಅನುಸರಣೆ ಮತ್ತು ಅರ್ಪಣಾ ಮನೋಭಾವದ ಪರಾಕಾಷ್ಠೆಯಾಗಿದೆ. ಅರ್ಥಾತ್ ಸ್ವಾರ್ಥ, ಸ್ವಂತಿಕೆ ಮತ್ತು ಅಹಂಕಾರದ ನೆಲೆವೀಡಾಗಿರುವ ಶಿರವನ್ನು ದೇವನ ಮುಂದೆ ನೆಲಕ್ಕೆ ಒರಗಿಸಿದೆ. ಇನ್ನು ಈ ತಲೆಯಲ್ಲಿ ಸ್ವಾಯತ್ತತೆಯಿಂದ ಕೂಡಿದ ವ್ಯವಹಾರ ಲವಲೇಶವೂ ಉಳಿದಿಲ್ಲ. ದಾಸನು ಇನ್ನು ಸಂಪೂರ್ಣವಾಗಿ ದೇವಾದೇಶಗಳಿಗೆ ಬದ್ಧನಾಗಿದ್ದಾನೆ.*

أَشْهَدُ أَنْ لَا إِلٰهَ إِلَّا اللّٰهُ وَأَشْهَدُ أَنَّ مُحَمَّدًا عَبْدُهُ وَرَسُولُهُ.

"ಅಶ್ಹದು ಅಲ್ಲಾಇಲಾಹ ಇಲ್ಲಲ್ಲಾಹು ವಅಶ್ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ"

ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ ಮತ್ತು ಮುಹಮ್ಮದ್(ಸ) ಅವರು ಅಲ್ಲಾಹನ ದಾಸರೂ ಪ್ರವಾದಿಯೂ ಆಗಿದ್ದಾರೆ ಎಂದು ನಾನು ಸಾಕ್ಷ್ಯ ನುಡಿಯುತ್ತೇನೆ.

ಹೀಗೆ ಸಾಕ್ಷ್ಯ ನುಡಿಯುವಾಗ ಬಲಗೈಯ ತೋರ್ಬೆರಳನ್ನು ಮೇಲಕ್ಕೆತ್ತಲಾಗುತ್ತದೆ. ಏಕೆಂದರೆ ಇದು ನಮಾಝಿನಲ್ಲಿ ಮಾಡಲಾಗುವ ಮುಸ್ಲಿಮರ ವಿಶ್ವಾಸದ ಪ್ರಕಟಣೆಯಾಗಿದೆ. ಅದನ್ನು ನಾಲಿಗೆಯಲ್ಲಿ ಉಚ್ಚರಿಸುವಾಗ ವಿಶೇಷ ಗಮನ ಕೊಡುವ ಮತ್ತು ಮೆದುಳಿಗೆ ಒತ್ತುಕೊಡುವ ಅಗತ್ಯವಿದೆ.

اَللّٰهُمَّ صَلِّ عَلٰى مُحَمَّدٍ وَّعَلٰى اٰلِ مُحَمَّدٍ كَمَا صَلَّيْتَ عَلٰى إِبْرَاهِيمَ

وَعَلٰى اٰلِ إِبْرَاهِيمَ إِنَّكَ حَمِيدٌ مَّجِيدٌ.

"ಅಲ್ಲಾಹುಮ್ಮ ಸಲ್ಲಿಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್"

ದೇವಾ! ಮುಹಮ್ಮದ್(ಸ) ಮತ್ತವರ ಸಂತತಿಯ ಮೇಲೆ ಕರುಣೆ ತೋರು. ನೀನು ಇಬ್ರಾಹೀಮ್ ಮತ್ತವರ ಸಂತತಿಯ ಮೇಲೆ ಕರುಣೆತೋರಿದಂತೆ. ನೀನು ಸ್ತುತ್ಯರ್ಹನೂ ಹಿರಿಮೆಯುಳ್ಳವನೂ ಆಗಿರುವೆ.

اَللّٰهُمَّ بَارِكْ عَلٰى مُحَمَّدٍ وَّعَلٰى اٰلِ مُحَمَّدٍ كَمَا بَارَكْتَ عَلٰى

إِبْرَاهِيمَ وَعَلٰى اٰلِ إِبْرَاهِيمَ إِنَّكَ حَمِيدٌ مَّجِيدٌ.

"ಅಲ್ಲಾಹುಮ್ಮ ಬಾರಿಕ್ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್ತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ್ ಇನ್ನಕ ಹಮೀದುಮ್ಮಜೀದ್"

ದೇವಾ! ಮುಹಮ್ಮದ್(ಸ) ಮತ್ತವರ ಸಂತತಿಯ ಮೇಲೆ ಸಮೃದ್ಧಿ ಪ್ರದಾನಿಸು. ನೀನು ಇಬ್ರಾಹೀಮ್ ಮತ್ತವರ ಸಂತತಿಗೆ ಸಮೃದ್ಧಿ ಪ್ರದಾನಿಸಿದಂತೆ. ನೀನು ಸ್ತುತ್ಯರ್ಹನೂ ಹಿರಿಮೆಯುಳ್ಳವನೂ ಆಗಿರುವೆ.

اَللّٰهُمَّ إِنِّي أَعُوذُ بِكَ مِنْ عَذَابِ جَهَنَّمَ وَأَعُوذُ بِكَ

مِنْ عَذَابِ الْقَبْرِ وَأَعُوذُ بِكَ مِنْ فِتْنَةِ الْمَسِيحِ الدَّجَّالِ

وَأَعُوذُ بِكَ مِنْ فِتْنَةِ الْمَحْيَا وَالْمَمَاتِ وَأَعُوذُ بِكَ مِنَ

الْمَأْثَمِ وَالْمَغْرَمِ.

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ಅದಾಬಿ ಜಹನ್ನಮ ವಅಊದು ಬಿಕ ಮಿನ್

ಇದಾಬಿಲ್ ಕಬ್ರಿ ವಅಊದು ಬಿಕ ಮಿನ್ ಫಿತನತಿಲ್ ಮಸೀಹಿದ್ದಜ್ಜಾಲ್ ವ ಅಊದುಬಿಕ ಮಿನ್ ಫಿತ್‌ನತಿಲ್ ಮಹ್ಯಾ ವಮಮಾತಿ ವಅಊದುಬಿಕ ಮಿನಲ್ ಮಾಸಿಮಿವಲ್ ಮಗ್ರಮ್."

ದೇವಾ! ನರಕ ಯಾತನೆಯಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ. ಗೋರಿಯ ಶಿಕ್ಷೆಯಿಂದ ನಿನ್ನ ಅಭಯ ಯಾಚಿಸುತ್ತೇನೆ. ದಜ್ಜಾಲನ ಕ್ಷೋಭೆಯಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ. ಜೀವನ ಮತ್ತು ಮರಣದ ಕ್ಷೋಭೆಗಳಿಂದ ನಿನ್ನ ಅಭಯ ಯಾಚಿಸುತ್ತೇನೆ. ದುಷ್ಕಾರ್ಯಗಳಿಂದ ಮತ್ತು ಪರರ ಹಕ್ಕುಗಳ ಬಾಧ್ಯತೆಯ ಬಗ್ಗೆ ನಿನ್ನ ಅಭಯ ಯಾಚಿಸುತ್ತೇನೆ.

ಇವು ದಿನ ರಾತ್ರಿಗಳ ಐದು ಹೊತ್ತಿನ ನಮಾಝಿನಲ್ಲಿ ಪುನರಾವರ್ತಿಸಲಾಗುವ ಉದ್ಧರಣೆಗಳೇ ಆಗಿವೆ. ಆದರೆ ರಾತ್ರಿ ಮಲಗುವ ಮೊದಲು ಅತ್ಯಂತ ಕೊನೆಯ ನಮಾಝಿನ ಕೊನೆಯ ರಕಅತ್‌ನಲ್ಲಿ ಮತ್ತೊಂದು 'ದುಆ'ವನ್ನು ಪಠಿಸಲಾಗುತ್ತದೆ. ಅದರ ಹೆಸರು 'ಕುನೂತ್ ಪ್ರಾರ್ಥನೆ' ಎಂದಾಗಿದೆ. ಇದು ಪ್ರಶಾಂತ ಘಳಿಗೆಯಲ್ಲಿ ದಾಸ ತನ್ನ ದೇವನ ಮುಂದೆ ಮಾಡುವ ಮಹತ್ವಪೂರ್ಣವಾದ ಪ್ರಮಾಣ ವಚನವಾಗಿದೆ.

اَللّٰهُمَّ اِنَّا نَسْتَعِيْنُكَ وَ نَسْتَغْفِرُكَ وَنُؤْمِنُ بِكَ وَ
نَتَوَكَّلُ عَلَيْكَ وَنُثْنِىْ عَلَيْكَ الْخَيْرَ وَ نَشْكُرُكَ وَلَا
نَكْفُرُكَ وَ نَخْلَعُ وَ نَتْرُكُ مَنْ يَّفْجُرُكَ -
اَللّٰهُمَّ اِيَّاكَ نَعْبُدُ وَلَكَ نُصَلِّىْ وَنَسْجُدُ وَاِلَيْكَ
نَسْعٰى وَنَحْفِدُ وَنَرْجُوْا رَحْمَتَكَ وَنَخْشٰى عَذَابَكَ
اِنَّ عَذَابَكَ بِالْكُفَّارِ مُلْحِقٌ.

"ಅಲ್ಲಾಹುಮ್ಮ ಇನ್ನಾ ನಸ್ತಈನುಕ ವನಸ್ತಗ್ಫಿರುಕ ವನುಅ್‌ಮಿನು ಬಿಕ ವನತವಕ್ಕಲು ಅಲೈಕ ವನುಸ್ನಿ ಅಲೈಕಲ್ ಖೈರ್ ವನಷ್ಕುರುಕ ವಲಾ ನಕ್ಫುರುಕ ವನಖ್‌ಲವು ವನತ್‌ರುಕು ಮನ್‌ಯಫ್‌ಜುರುಕ. ಅಲ್ಲಾಹುಮ್ಮ ಇಯ್ಯಾಕ ನಅ್‌ಬುದು ವಲಕನುಸಲ್ಲಿ ವನಸ್ಜುದು ವಇಲೈಕ ನಸ್‌ಆ ವನಹ್‌ಫಿದು ವನರ್ಜೂ ರಹ್ಮತಕ ವನಖ್ಶಾ ಅದಾಬಕ ಇನ್ನ ಅದಾಬಕ ಬಿಲ್ ಕುಫ್ಫಾರಿ ಮುಲ್ಹಿಕ್"

ಅಲ್ಲಾಹನೇ! ನಾವು ನಿನ್ನಿಂದಲೇ ಸಹಾಯ ಯಾಚಿಸುತ್ತೇವೆ. ನಿನ್ನಿಂದಲೇ ಪಾಪಗಳಿಗೆ ಕ್ಷಮೆ ಯಾಚಿಸುತ್ತೇವೆ. ನಿನ್ನಲ್ಲೇ ವಿಶ್ವಾಸವಿಡುತ್ತೇವೆ. ನಿನ್ನಲ್ಲೇ ಭರವಸೆಯಿಡುತ್ತೇವೆ. ನಿನ್ನನ್ನು ಅತ್ಯುತ್ತಮ ರೀತಿಯಲ್ಲಿ ಸ್ತುತಿಸುತ್ತೇವೆ. ನಿನಗೆ ಕೃತಘ್ನತೆ ತೋರುವುದಿಲ್ಲ. ನಿನ್ನ ಆಜ್ಞೋಲ್ಲಂಘನೆ ಮಾಡುವವರನ್ನು ನಾವು ತೊರೆಯುತ್ತೇವೆ ಮತ್ತು ಅವರೊಂದಿಗೆ ಸಂಬಂಧ ಕಡಿದುಕೊಳ್ಳುತ್ತೇವೆ. ಅಲ್ಲಾಹನೇ ನಾವು ನಿನ್ನ ದಾಸ್ಯೋಪಾಸನೆಯನ್ನೇ ಮಾಡುತ್ತೇವೆ. ನಿನಗಾಗಿಯೇ ನಮಾಝ್ ನಿರ್ವಹಿಸುತ್ತೇವೆ. ನಿನಗೇ ಸಾಷ್ಟಾಂಗವೆರಗುತ್ತೇವೆ. ನಮ್ಮೆಲ್ಲಾ ಪ್ರಯತ್ನ ಮತ್ತು ಚಟುವಟಿಕೆಗಳು ನಿನಗಾಗಿಯೇ ಆಗಿದೆ. ನಿನ್ನ ಅನುಗ್ರಹವನ್ನಷ್ಟೇ ನಾವು

ನಿರೀಕ್ಷಿಸುತ್ತೇವೆ. ನಿನ್ನ ಯಾತನೆಯ ಬಗ್ಗೆ ನಾವು ಭಯಪಡುತ್ತೇವೆ. ನಿಶ್ಚಯವಾಗಿಯೂ ಧಿಕ್ಕರಿಸುವವರನ್ನು ನಿನ್ನ ಯಾತನೆ ಆವರಿಸಿಯೇ ತೀರುವುದು.

ಈ ಉದ್ಧರಣೆಗಳು ವ್ಯಾಖ್ಯಾನ ಮತ್ತು ವಿವರಣೆಯ ಅಗತ್ಯವಿಲ್ಲದಷ್ಟು ಸ್ಫುಟವಾಗಿವೆ. ಇಸ್ಲಾಮ್ ತನ್ನ ಪೌರ ಸೇವೆ, ಸೇನೆ ಮತ್ತು ಸಮಾಜದ ಇತರ ರಂಗಗಳಲ್ಲಿರುವ ವ್ಯಕ್ತಿಗಳನ್ನು ಯಾವ ಸ್ಫೂರ್ತಿ, ಸಂಕಲ್ಪಗಳ ಆಧಾರದಲ್ಲಿ ನೆಲೆಗೊಳಿಸಬಯಸುತ್ತದೆ ಮತ್ತು ಯಾವ ಅಂಶಗಳನ್ನು ಅವರ ಹೃದಯದಲ್ಲಿ ಬಿತ್ತ ಬಯಸುತ್ತದೆ ಯಾವ ರೀತಿಯ ಗುಣವಿಶೇಷತೆಗಳನ್ನು ಅವರಲ್ಲಿ ಬೆಳೆಸಬಯಸುತ್ತದೆ ಎಂಬ ಅಂಶ ಇಲ್ಲಿ ಸ್ಪಷ್ಟವಾಗಿದೆ. ವ್ಯಕ್ತಿ ಸ್ವತಃ ಅದನ್ನು ಕಂಡರಿಯಬಹುದಾಗಿದೆ. ಕೇವಲ ಕವಾಯಿತುಗಳ ಮೂಲಕ ಸಿದ್ಧಪಡಿಸಿದ ಸೇನೆ ಇಸ್ಲಾಮಿನ ಮಟ್ಟಿಗೆ ಯಾವ ಪ್ರಯೋಜನಕ್ಕೂ ಬರಲಾರದು. ಕೇವಲ ಆಡಳಿತಾತ್ಮಕ ಅರ್ಹತೆಗಳುಳ್ಳ ಪೌರಸೇವಕರ ಅಗತ್ಯವೂ ಇಸ್ಲಾಮಿಗಿಲ್ಲ. ಇಸ್ಲಾಮ್ ಎಂತಹ ಸೈನಿಕರು ಮತ್ತು ಕಾರ್ಯಕರ್ತರನ್ನು ಬಯಸುತ್ತದೆಂದರೆ ಅವರಲ್ಲಿ ಶಿಸ್ತುಬದ್ಧತೆಯ ಜತೆಗೆ ದೇವ ಭಯವೂ ಇರಬೇಕು, ಶಿರಚ್ಛೇದನ ನಡೆಸುವ ಮತ್ತು ಶಿರಚ್ಛೇದನಕ್ಕೆ ಒಳಗಾಗುವುದರ ಜತೆಗೆ ಮನಸ್ಸನ್ನು ಬದಲಿಸುವ ಮತ್ತು ಚಾರಿತ್ರ್ಯವನ್ನು ರೂಪಿಸುವ ಶಕ್ತಿಯನ್ನೂ ಅವರು ಹೊಂದಿರಬೇಕು. ಅವರು ಕೇವಲ ಭೂಮುಖದಲ್ಲಿ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳುವವರು ಮಾತ್ರವಲ್ಲ, ಜನರ ಸುಧಾರಕರೂ ಆಗಿರುವರು. ಈ ಹಿನ್ನೆಲೆಯೊಂದಿಗೆ ನೋಡುವುದಾದರೆ ಇಸ್ಲಾಮಿನ ಉದ್ದೇಶ ಸಾಧನೆಗೆ ನಮಾಝಿಗೆ ಹೊರತಾದ ಅಥವಾ ಅದಕ್ಕಿಂತ ಉತ್ತಮವಾದ ಬೇರೊಂದು ತರಬೇತಿ ವಿಧಾನವಿಲ್ಲವೆಂದು ನಿಮಗೆ ವ್ಯಕ್ತವಾಗುತ್ತದೆ. ಈ ಬಗ್ಗೆ ನಿಮ್ಮ ಮನಸ್ಸೇ ಸಾಕ್ಷ್ಯ ನುಡಿಯುತ್ತದೆ. ಈ ವ್ಯವಸ್ಥೆಯ ಆಶ್ರಯದಲ್ಲಿ ಸರಿಯಾಗಿ ತರಬೇತಿ ಹೊಂದುವವರೊಂದಿಗೇ ನೀವು ನಿಮ್ಮ ನಿರೀಕ್ಷೆಗಳನ್ನಿಟ್ಟುಕೊಳ್ಳಬಹುದಾಗಿದೆ. ಅಮಾನತ್ತು, ಹೊಣೆಗಾರಿಕೆ ಮತ್ತು ಅಲ್ಲಾಹನ ಹಾಗೂ ದಾಸರ ಹಕ್ಕುಗಳಿಗೆ ಸಂಬಂಧಿಸಿದ ಬಾಧ್ಯತೆಗಳನ್ನು ವಹಿಸಿಕೊಡಲಾದರೆ ಅವನು ಅದನ್ನು ದೇವಭಯದೊಂದಿಗೆ ನಿಭಾಯಿಸುತ್ತಾನೆ ಎಂಬ ಭರವಸೆಯನ್ನು ಅಂತಹವರ ಬಗ್ಗೆ ಮಾತ್ರ ತಾಳಬಹುದಾಗಿದೆ. ಆದ್ದರಿಂದಲೇ ಪವಿತ್ರ ಕುರ್‌ಆನ್‌ನಲ್ಲಿ ಹೀಗೆನ್ನಲಾಗಿದೆ.

إِنَّ الصَّلَوٰةَ تَنْهَىٰ عَنِ الْفَحْشَاءِ وَالْمُنكَرِ ـ

"ನಿಶ್ಚಯವಾಗಿಯೂ ನಮಾಝ್ ನಿಮ್ಮನ್ನು ಅಶ್ಲೀಲತೆಯಿಂದಲೂ ಕೆಡುಕುಗಳಿಂದಲೂ ತಡೆಯುತ್ತದೆ."

(ಅಲ್‌ಅನ್‌ಕಬೂತ್:45)

ಈ ಕಾರಣದಿಂದಲೇ ಪುರಾತನ ಕಾಲದಿಂದಲೂ ನಮಾಝ್ ಇಸ್ಲಾಮೀ ಆಂದೋಲನದ ಅವಿಭಾಜ್ಯ ಅಂಗವಾಗಿತ್ತು. ಅಲ್ಲಾಹನಿಂದ ನಿಯುಕ್ತರಾದ ಎಲ್ಲಾ ಪ್ರವಾದಿಗಳ ಶರೀಅತ್‌ನಲ್ಲೂ ನಮಾಝ್‌ಗೆ ಪ್ರಾಥಮಿಕ ಪ್ರಾಶಸ್ತ್ಯ ನೀಡಲಾಗಿತ್ತು. ನಮಾಝ್ ಎಂಬ ತರಬೇತಿ ವ್ಯವಸ್ಥೆ ಮುರಿದು ಬಿದ್ದಾಗಲೆಲ್ಲಾ ಇಸ್ಲಾಮೀ ಆಂದೋಲನ ಪತನಕ್ಕೀಡಾಯಿತು.

فَخَلَفَ مِن بَعْدِهِمْ خَلْفٌ أَضَاعُوا الصَّلَوٰةَ وَاتَّبَعُوا
الشَّهَوَاتِ فَسَوْفَ يَلْقَوْنَ غَيًّا ـ

"ಅವರ ಬಳಿಕ ಅಯೋಗ್ಯರಾದವರು ಅವರ ಉತ್ತರಾಧಿಕಾರಿಗಳಾದರು. ಅವರು ನಮಾಝನ್ನು ವ್ಯರ್ಥಗೊಳಿಸಿದರು ಮತ್ತು ದೇಹೇಚ್ಛೆಗಳನ್ನು ಅನುಸರಿಸಿದರು. ಆದ್ದರಿಂದ ಶೀಘ್ರದಲ್ಲೇ ಅವರು ಪಥಭ್ರಷ್ಟತೆಯ ಪರಿಣಾಮವನ್ನು ಅನುಭವಿಸಲಿರುವರು."

(ಪವಿತ್ರಕುರ್‌ಆನ್, 19:59)

ಇದಕ್ಕಿರುವ ಕಾರಣ ಸ್ಪಷ್ಟವಿದೆ. ಇಸ್ಲಾಮಿನ ರೀತಿಯನ್ನು ಅನುಸರಿಸಲು ಇಸ್ಲಾಮೀ ಚಾರಿತ್ರ್ಯ ಅಪೇಕ್ಷಣೀಯವಾಗಿದೆ. ಇಸ್ಲಾಮೀ ಚಾರಿತ್ರ್ಯ ನಮಾಝ್ ಎಂಬ ತರಬೇತಿ ವ್ಯವಸ್ಥೆಯ ಮೂಲಕವೇ ರೂಪುತಾಳುತ್ತದೆ. ಈ ವ್ಯವಸ್ಥೆ ಮುರಿದು ಬಿದ್ದರೆ ಚಾರಿತ್ರ್ಯವೂ ಪತನಗೊಳ್ಳುತ್ತದೆ. ಅದರ ಸಹಜ ಪರಿಣಾಮ ಅಧಃಪತನವಾಗಿದೆ.

## ಆತ್ಮ ನಿಯಂತ್ರಣ

ಚಾರಿತ್ರ್ಯ ನಿರ್ಮಾಣದ ಜತೆಗೆ ನಮಾಝ್ ವ್ಯಕ್ತಿಯಲ್ಲಿ ಆತ್ಮ ಸಂಸ್ಕರಣೆಯ ಶಕ್ತಿಯನ್ನು ಬೆಳೆಸುತ್ತದೆ. ಅದರ ವಿನಾ ಸಚ್ಚಾರಿತ್ರ್ಯದ ಉದ್ದೇಶ ಈಡೇರಲಾರದು. ಮಾನವನ ಅಹಂಭಾವವನ್ನು ತರಬೇತಿಗೊಳಿಸಿ ಸುಸಂಸ್ಕೃತಗೊಳಿಸುವುದೇ ನಿಜವಾಗಿ ಚಾರಿತ್ರ್ಯ ನಿರ್ಮಾಣದ ಪ್ರಕ್ರಿಯೆಯಾಗಿದೆ. ಆದರೆ ತರಬೇತಿಗೊಳಿಸಲ್ಪಟ್ಟ 'ಅಹಂ', ಅದರ ಉಪಕರಣದಂತಿರುವ ದೈಹಿಕ ಮತ್ತು ಮಾನಸಿಕ ಶಕ್ತಿಗಳ ಮೇಲೆ ಪ್ರಾಯೋಗಿಕವಾದ ಹಿಡಿತ ಸಾಧಿಸಬೇಕಾಗಿದೆ. ಅನ್ಯಥಾ ಅದನ್ನು ತರಬೇತಿಗೊಳಿಸಿ ಸುಸಂಸ್ಕೃತವನ್ನಾಗಿ ಮಾಡಲಾದ ಉದ್ದೇಶವೇ ಈಡೇರಲಾರದು. ಅರ್ಥಾತ್ ಸಚ್ಚಾರಿತ್ರ್ಯ ಮತ್ತು ನೇರ ನಡೆ-ನುಡಿ ಬೆಳೆಯಲಾರದು.

ಇದನ್ನು ಉದಾಹರಣೆಯೊಂದರ ಮೂಲಕ ಹೀಗೆ ತಿಳಿದುಕೊಳ್ಳಬಹುದು- ವಾಹನ ಮತ್ತು ಚಾಲಕ ಸೇರಿ ಓರ್ವ ಮಾನವನಾಗುತ್ತಾನೆ ಎಂದು ಕಲ್ಪಿಸಿಕೊಳ್ಳಿ. ವಾಹನದ ಬಿಡಿಭಾಗಗಳೆಲ್ಲವೂ ಅದರ ಶಕ್ತಿಯ ಸಹಿತ ಚಾಲಕನ ನಿಯಂತ್ರಣದಲ್ಲಿದ್ದು ಚಾಲಕ ಸ್ವತಃ ಸಚ್ಚರಿತ, ಸುಸಂಸ್ಕೃತ ಮತ್ತು ದಾರಿಯನ್ನು ಬಲ್ಲವನಾಗಿರಬೇಕು. ಆಗ ಮಾತ್ರ ಕಾರ್ಯಸಾಧಿತವಾಗುತ್ತದೆ. ಅನ್ಯಥಾ ಚಾಲಕನನ್ನು ನೀವು ತರಬೇತಿಗೊಳಿಸಿ ಸಿದ್ಧಪಡಿಸಿದ್ದೀರಿ. ಆದರೆ ಸ್ಟಿಯರಿಂಗ್, ಬ್ರೇಕ್ ಮತ್ತು ಎಕ್ಸಲೇಟರ್ ಸಂಪೂರ್ಣವಾಗಿ ಅವನ ನಿಯಂತ್ರಣದಲ್ಲಿಲ್ಲ ಅಥವಾ ಸಂಪೂರ್ಣ ಹಿಡಿತ ಅವನಿಗಿಲ್ಲವೆಂದು ಕಲ್ಪಿಸಿಕೊಳ್ಳಿ. ಇಂತಹ ಪರಿಸ್ಥಿತಿಯಲ್ಲಿ ಚಾಲಕ ವಾಹನವನ್ನು ಚಲಾಯಿಸುವ ಬದಲು ವಾಹನವು ಚಾಲಕನನ್ನು ಚಲಾಯಿಸುತ್ತದೆ. ಆದರೆ ವಾಹನ ಚಲಿಸಬಲ್ಲುದೇ ಹೊರತು ದೃಷ್ಟಿ, ಪರಿಜ್ಞಾನ ಅಥವಾ ರಸ್ತೆಯ ಅರಿವು ಅದಕ್ಕಿರುವುದಿಲ್ಲ. ಆದ್ದರಿಂದ ಅದು ಚಾಲಕನ ಜತೆ ಅಡ್ಡಾದಿಡ್ಡಿ ರಸ್ತೆಗಳಲ್ಲಿ ಮನಬಂದಂತೆ ಚಲಿಸುವುದು. ಮಾನವನ ದೈಹಿಕ ಮತ್ತು ಮಾನಸಿಕ ಶಕ್ತಿಗಳ ಸ್ಥಾನ ಈ ವಾಹನದ್ದಾಗಿದೆ. ಅವನ 'ಅಹಂ' ಚಾಲಕನ ಸ್ಥಾನವನ್ನು ಹೊಂದಿದೆ. ಮಾನವನ ದೈಹಿಕ ಮತ್ತು ಮಾನಸಿಕ ಶಕ್ತಿಗಳು ಲೋಹದ ವಾಹನದಂತೆಯೇ ಅಜ್ಞವಾಗಿದೆ. ಆದರೆ ಆ ಶಕ್ತಿಗಳು ಸಜೀವವಾದರೆ, ವಾಹನ ನಿರ್ಜೀವವಾಗಿದೆ. ಅವುಗಳಿಗೆ ಆಸೆ, ಆಕಾಂಕ್ಷೆ ಮತ್ತು ಪ್ರತಿಭೆಗಳಿವೆ. ಚಾಲಕ ಅವುಗಳನ್ನು ನಿಯಂತ್ರಿಸುವ ಬದಲು ತಾನು ಚಾಲಕನನ್ನು ನಿಯಂತ್ರಿಸಬೇಕೆಂದು ಅದು ಸದಾ ಪ್ರಯತ್ನಿಸುತ್ತಿರುತ್ತದೆ. ಈ

ವಾಹನವು ಚಾಲಕನನ್ನು ಅತಿಜಯಿಸದ ರೀತಿಯಲ್ಲಿ ಅವನನ್ನು ಸಿದ್ಧಪಡಿಸುವುದೇ ಎಲ್ಲಾ ಪ್ರವಾದಿಗಳ ಬೋಧನೆಯ ಉದ್ದೇಶವಾಗಿದೆ. ಚಾಲಕ ಸ್ವತಃ ಅದನ್ನು ನಿಯಂತ್ರಿಸಿ ಉದ್ದಿಷ್ಟ ತಾಣದೆಡೆಗೊಯ್ಯುವ ಸನ್ಮಾರ್ಗದಲ್ಲಿ ಅದನ್ನು ಮುನ್ನಡೆಸಬೇಕು. ಈ ಉದ್ದೇಶ ಸಾಧನೆಗೆ ಚಾಲಕನಿಗೆ ರಸ್ತೆಯ ಜ್ಞಾನ, ವಾಹನವನ್ನು ಉಪಯೋಗಿಸುವ ರೀತಿ, ಉಪಯೋಗದ ಉದ್ದೇಶ ಮತ್ತು ಚಾಲಕನ ಶಿಷ್ಟಾಚಾರಗಳನ್ನು ಕಲಿಸಿ ಓರ್ವ ಸುಸಂಸ್ಕೃತ ಮತ್ತು ಪರಿಣತ ಚಾಲಕನನ್ನಾಗಿ ಮಾಡಬೇಕು. ಅದರ ಜತೆಗೆ ಸ್ಟಿಯರಿಂಗ್, ಬ್ರೇಕ್, ಎಕ್ಸ್‌ಲೇಟರ್ ಇತ್ಯಾದಿಗಳು ಸದಾ ಸರಿಯಾಗಿರಬೇಕು. ಅದರ ಮೇಲೆ ಚಾಲಕನ ಹಿಡಿತ ಭದ್ರವಾಗಿರಬೇಕು. ಏಕೆಂದರೆ ನಿರಂಕುಶ ವಾಹನ ಸದಾ ಪಥಭ್ರಷ್ಟತೆಯೆಡೆಗೆ ಸಾಗಲು ಹಾತೊರೆಯುತ್ತಿರುತ್ತದೆ.

ನಮಾಝಿನಲ್ಲಿ ಪ್ರಾರ್ಥನೆ ಮತ್ತು ಕೀರ್ತನೆಗಳ ಜತೆಗೆ ಸಮಯದ ನಿರ್ಬಂಧ, ಶುಚಿತ್ವ ಇತ್ಯಾದಿ ಶರ್ತಗಳನ್ನು ಮತ್ತು ದೈಹಿಕ ಚಲನವಲನಗಳ ಸಂಬಂಧವನ್ನು ಈ ಕಾರಣಕ್ಕಾಗಿಯೇ ಜೋಡಿಸಲಾಗಿದೆ. ಚಾಲಕ ತನ್ನ ವಾಹನದ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರಬೇಕು ಮತ್ತು ತನ್ನಿಚ್ಛೆಯಂತೆ ಅದನ್ನು ನಡೆಸಲು ಆಸಕ್ತನಾಗಿರಬೇಕು ಎಂಬುದೇ ಇದರ ಉದ್ದೇಶ. ಈ ರೀತಿ ವಾಹನದ ದರ್ಪವನ್ನು ದಿನದಲ್ಲಿ ಐದು ಬಾರಿ ಮುರಿಯಲಾಗುತ್ತದೆ. ಅದಕ್ಕೆ ಬ್ರೇಕು ಹಾಕಲಾಗುತ್ತದೆ, ಎಕ್ಸ್‌ಲೇಟರ್ ಮತ್ತು ಸ್ಟಿಯರಿಂಗ್‌ಗಳನ್ನು ಭದ್ರಪಡಿಸಲಾಗುತ್ತದೆ. ಚಾಲಕನ ನಿಯಂತ್ರಣವನ್ನು ವೃದ್ಧಿಸಲಾಗುತ್ತದೆ.

ಪ್ರಭಾತದ ಹೊತ್ತು- ಸವಿ ನಿದ್ರೆಯಲ್ಲಿದ್ದೀರಿ. ಆರಾಮ ಪ್ರಿಯ ಮನಸ್ಸು, ಹಾಗೆಯೇ ಬಿದ್ದಿರು, ಈಗೆಲ್ಲಿಗೆ ಎದ್ದು ಹೋಗುವೆ ಎನ್ನುತ್ತದೆ. ಅದೇ ವೇಳೆ ನಮಾಝ್ ನಿಮ್ಮಲ್ಲಿ ಹೀಗೆ ಹೇಳುತ್ತದೆ- "ಸಮಯವಾಗಿದೆ ಎದ್ದೇಳು. ಸ್ನಾನ ಅಗತ್ಯವಾಗಿದ್ದರೆ ಸ್ನಾನ ಮಾಡಿಕೋ. ಇಲ್ಲವೇ ಅಂಗಸ್ನಾನ ಮಾಡಿಕೋ. ಚಳಿಗಾಲವಾಗಿದ್ದರೂ ಸರಿ. ನೀರು ಬಿಸಿಯಿಲ್ಲದಿದ್ದರೂ ಸರಿ, ತಣ್ಣೀರಿನಿಂದಲೇ ಶುಚಿತ್ವದ ಏರ್ಪಾಟು ಮಾಡಿಕೋ. ಮಸೀದಿಯೆಡೆಗೆ ಧಾವಿಸು" ಈ ಎರಡು ತದ್ವಿರುದ್ಧ ಬೇಡಿಕೆಗಳ ನಡುವೆ ನೀವು ಸ್ವೇಚ್ಛೆಯ ಕರೆಗೆ ಓಗೊಟ್ಟರೆ ವಾಹನ ನಿಮ್ಮ ಮೇಲೆ ಸವಾರಿ ನಡೆಸಿತೆಂದರ್ಥ. ನೀವು ನಮಾಝ್‌ನ ಕರೆಗೆ ಓಗೊಟ್ಟರೆ ವಾಹನವನ್ನು ನೀವು ನಡೆಸುತ್ತಿದ್ದೀರಿ ಎಂದರ್ಥ. ಹಾಗೆಯೇ ಝುಹರ್, ಅಸ್ರ್, ಮಗ್ರಿಬ್ ಮತ್ತು ಇಷಾ ಹೀಗೆ ಪ್ರತಿಯೊಂದು ಹೊತ್ತಿನಲ್ಲೂ ನಿಮ್ಮ ಮನಸ್ಸು ಯಾವುದಾದರೊಂದು ನಿಬಿಡತೆ, ಲಾಭ, ನಷ್ಟ, ಅಭಿರುಚಿ, ಆಸಕ್ತಿ, ಸಂಕಷ್ಟ ಮುಂತಾದ ನೆವನಗಳನ್ನು ಮುಂದಿಡುತ್ತದೆ. ನಿಮ್ಮಲ್ಲಿ ಸ್ವಲ್ಪ ದೌರ್ಬಲ್ಯ ಬೆಳೆದ ತಕ್ಷಣ ನಿಮ್ಮ ಮೇಲೆ ಸವಾರಿ ನಡೆಸುವ ಸಂದರ್ಭವನ್ನು ಅದು ಕಾಯುತ್ತಿರುತ್ತದೆ. ಆದರೆ ನಮಾಝ್ ಸದಾ ನಿಮ್ಮ ಪಾಲಿಗೆ ಎಚ್ಚರಿಕೆ ನೀಡುತ್ತಾ ಆಗಮಿಸುತ್ತದೆ. ನಿಮ್ಮ ಮಂಪರು ಕವಿದ ಸಂಕಲ್ಪವನ್ನು ತಟ್ಟಿ ಎಬ್ಬಿಸುತ್ತದೆ, ನಿಮ್ಮ ವಾಹನವನ್ನು ನಿಮ್ಮ ಆದೇಶಕ್ಕೆ ಬದ್ಧಗೊಳಿಸಿ, ನೀವು ಅದರ ಗುಲಾಮರಾಗಬೇಡಿ ಎಂದು ನಿಮಗೆ ಆಜ್ಞಾಪಿಸುತ್ತದೆ. ಈ ಸಂಘರ್ಷ ನಿಮಗೆ ನಿತ್ಯ ತಲೆದೋರುತ್ತದೆ. ವಿಭಿನ್ನ ಸಂದರ್ಭ, ಸಮಯ ಮತ್ತು ಸ್ವರೂಪಗಳಲ್ಲಿ ಅದು ಪ್ರತ್ಯಕ್ಷಗೊಳ್ಳುತ್ತದೆ. ಯಾತ್ರೆಯ ವೇಳೆ ಮತ್ತು ಊರಿನಲ್ಲಿರುವಾಗ, ಬೇಸಿಗೆ ಮತ್ತು ಚಳಿಯಲ್ಲಿ, ಪುರುಸೊತ್ತು ಮತ್ತು ನಿಬಿಡತೆಯ ವೇಳೆ,

ಮನರಂಜನೆ ಮತ್ತು ಸಂಕಷ್ಟದ ವೇಳೆ ಹೀಗೆ ವಿಭಿನ್ನ ಬಗೆಯ ಸಂದರ್ಭಗಳಲ್ಲಿ ನಮಾಝ್ ಮತ್ತು ಮನಸೇಚ್ಛೆಗಳ ನಡುವೆ ಸಂಘರ್ಷ ಏರ್ಪಡುತ್ತದೆ. ನೀವು ಪರೀಕ್ಷೆಗೆ ಒಡ್ಡಲ್ಪಡುತ್ತೀರಿ. ಮನಸೇಚ್ಛೆಯ ಕರೆಗೆ ಓಗೊಟ್ಟರೆ ನೀವು ಸೋಲುತ್ತೀರಿ. ಆಗ ನಿಮ್ಮ ಅಧೀನದಲ್ಲಿರಬೇಕಾದ ಸಾಧನ ನಿಮ್ಮನ್ನು ಅತಿಜಯಿಸಿದಂತಾಗುತ್ತದೆ. ಕುರುಡು ಮತ್ತು ಅಜ್ಞಾನಿಯಾದ ವಾಹನದ ವಶಕ್ಕೆ ನೀವು ನಿಮ್ಮನ್ನು ಒಪ್ಪಿಸಿದಂತಾಗುತ್ತದೆ. ಅನಂತರ ಅದು ಅಡ್ಡಾದಿಡ್ಡಿಯಾದ ಮಾರ್ಗಗಳಲ್ಲಿ ನಿಮ್ಮನ್ನು ಕೊಂಡೊಯ್ಯುತ್ತದೆ. ನೀವು ಅಸಹಾಯಕರಾಗಿ ಅದರ ಜತೆ ಸಾಗುತ್ತಿರುವಿರಿ. ಇದಕ್ಕೆ ಪ್ರತಿಯಾಗಿ ನೀವು ನಮಾಝಿನ ಬೇಡಿಕೆಗಳನ್ನು ಈಡೇರಿಸುತ್ತಿದ್ದರೆ ನೀವು ಆ ವಾಹನದ ಪ್ರತಿರೋಧವನ್ನು ಮುರಿದಂತಾಗುತ್ತದೆ. ನೀವು ಅದರ ಮೇಲೆ ಆಡಳಿತ ನಡೆಸಿದಂತಾಗುತ್ತದೆ. ಆಗ ಮಾತ್ರ ನಿಮ್ಮ ಜ್ಞಾನ ಮತ್ತು ಪ್ರತಿಭೆಗಳ ಅನುಸಾರ ನೀವಿಚ್ಛಿಸಿದಂತೆ ಅದರ ಬಿಡಿಭಾಗಗಳಿಂದ ಮತ್ತು ಅದರ ಶಕ್ತಿಯಿಂದ ಪ್ರಯೋಜನ ಪಡೆಯಲು ನಿಮಗೆ ಸಾಧ್ಯವಾಗುತ್ತದೆ.

ಆದ್ದರಿಂದಲೇ 'ನಮಾಝನ್ನು ತೊರೆದರೆ ಅದರ ಸಹಜ ಪರಿಣಾಮವೆಂಬಂತೆ ವ್ಯಕ್ತಿ ಸ್ವೇಚ್ಛೆ ಮತ್ತು ಸ್ವಾರ್ಥಗಳ ದಾಸನಾಗುತ್ತಾನೆ ಮತ್ತು ಸನ್ಮಾರ್ಗದಿಂದ ವಿಮುಖನಾಗಿ ದುರ್ಮಾರ್ಗಗಳಲ್ಲಿ ದಾರಿತಪ್ಪಿ ನಡೆಯುತ್ತಾನೆ' ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ-

فَخَلَفَ مِنْ بَعْدِهِمْ خَلْفٌ أَضَاعُوا الصَّلٰوةَ وَاتَّبَعُوا
الشَّهَوَاتِ فَسَوْفَ يَلْقَوْنَ غَيًّا ۔

"ಅವರ ಬಳಿಕ ಅಯೋಗ್ಯರಾದವರು ಅವರ ಉತ್ತರಾಧಿಕಾರಿಗಳಾದರು, ಅವರು ನಮಾಝನ್ನು ವ್ಯರ್ಥಗೊಳಿಸಿದರು ಮತ್ತು ದೇಹೇಚ್ಛೆಗಳನ್ನು ಅನುಸರಿಸಿದರು. ಆದ್ದರಿಂದ ಶೀಘ್ರದಲ್ಲೇ ಅವರು ಪಥಭ್ರಷ್ಟತೆಯ ಪರಿಣಾಮವನ್ನು ಅನುಭವಿಸಲಿರುವರು." (19:59)

## ವ್ಯಕ್ತಿಗಳ ನಿರ್ಮಾಣದ ಪ್ರಕ್ರಿಯೆ

ಈ ತನಕ ವಿವರಿಸಲಾಗಿರುವುದು ನಮಾಝಿನ ಪ್ರಯೋಜನಗಳ ಒಂದು ಮುಖ ಮಾತ್ರವಾಗಿದೆ. ಅದು ನಮಾಝ್ ವ್ಯಕ್ತಿಗಳ ನಿರ್ಮಾಣ ಹೇಗೆ ಮಾಡುತ್ತದೆ ಎಂಬುದು. ಇನ್ನು ಅದರ ಇನ್ನೊಂದು ಮುಖದ ಕಡೆಗೆ ಗಮನ ಹರಿಸುವ ಮೊದಲು ವ್ಯಕ್ತಿತ್ವ ನಿರ್ಮಾಣದ ಈ ಸಮಗ್ರ ಪ್ರಕ್ರಿಯೆಯನ್ನೊಮ್ಮೆ ನೋಡಿ. ಈ ಪ್ರಕ್ರಿಯೆಯ ಐದು ಭಾಗಗಳಿವೆ-

1. ವ್ಯಕ್ತಿಯು ಲೋಕದಲ್ಲಿ ಸರ್ವಾಧಿಕಾರಿಯಲ್ಲ, ಬದಲಾಗಿ ಅವನು ಸರ್ವಲೋಕಗಳ ಪ್ರಭುವಿನ ದಾಸನಾಗಿದ್ದಾನೆ. ಇಲ್ಲಿ ಅವನು ಆ ನೆಲೆಯಲ್ಲೇ ಕಾರ್ಯವೆಸಗಬೇಕಾಗಿದೆ ಎಂಬ ವಾಸ್ತವಿಕತೆಯನ್ನು ಅವನ ಮನಸ್ಸಿನಲ್ಲಿ ಜಾಗೃತವಾಗಿರಿಸುವುದು.

2. ಓರ್ವ ದಾಸನೆಂಬ ನೆಲೆಯಲ್ಲಿ ಅವನನ್ನು ಕರ್ತವ್ಯ ಪ್ರಜ್ಞೆಯುಳ್ಳವನಾಗಿ ಮಾಡುವುದು ಮತ್ತು ಅವನಲ್ಲಿ ಕರ್ತವ್ಯ ನಿಷ್ಠೆಯ ಪ್ರವೃತ್ತಿ ಬೆಳೆಸುವುದು.

3. ಕರ್ತವ್ಯ ನಿಷ್ಠರು ಮತ್ತು ಕರ್ತವ್ಯಚ್ಯುತಿ ಮಾಡುವವರ ನಡುವೆ ಭೇದಕಲ್ಪಿಸುವುದು

ಮತ್ತು ಕರ್ತವ್ಯ ಹೀನರನ್ನು ಆರಿಸಿ ಪ್ರತ್ಯೇಕಗೊಳಿಸುವುದು.

4. ಕಲ್ಪನೆಯ ಒಂದು ಸಮಸ್ತ ವ್ಯವಸ್ಥೆ ಮತ್ತು ಸಮಸ್ತ ಸಿದ್ಧಾಂತವನ್ನು ವ್ಯಕ್ತಿಗೆ ಮುಂದಟ್ಟುಗೊಳಿಸುವುದು. ಅದು ಅವನ ಶಾಶ್ವತ ಚರ್ಯೆಯಾಗುವ ರೀತಿಯಲ್ಲಿ ಅದನ್ನು ಬೇರೂರಿಸುವುದು.

5. ವ್ಯಕ್ತಿ ತನ್ನ ವಿಶ್ವಾಸ ಮತ್ತು ಜ್ಞಾನ ಹಾಗೂ ಅಂತಃದೃಷ್ಟಿಯ ಯಾವ ಧೋರಣೆಯನ್ನು ಸರಿಯೆಂದು ಭಾವಿಸುತ್ತಾನೋ ಅದರಂತೆ ವರ್ತಿಸಲು ಅವನನ್ನು ಸಿದ್ಧಪಡಿಸುವುದು. ಈ ನಿಟ್ಟಿನಲ್ಲಿ ಅವನು ತನ್ನೆಲ್ಲಾ ದೈಹಿಕ ಮತ್ತು ಮಾನಸಿಕ ಶಕ್ತಿಗಳಿಂದ ಪ್ರಯೋಜನ ಪಡೆಯುವಂತೆ ಮಾಡುವುದು. ನಿರ್ದಿಷ್ಟ ಮಾರ್ಗವನ್ನು ಸರಿಯೆಂದು ಭಾವಿಸಿದರೂ, ತನ್ನ ಮನಃಸೇಚ್ಛೆಗಳಿಂದ ನಿರ್ಬಂಧಿತನಾಗಿ ಇನ್ನೊಂದು ಮಾರ್ಗವನ್ನು ಅನುಸರಿಸುವಂತಹ ಸಡಿಲು ಧೋರಣೆ ಅವನ ವ್ಯಕ್ತಿತ್ವದಲ್ಲಿ ಇಲ್ಲದಂತೆ ಮಾಡುವುದು.

ಇಸ್ಲಾಮ್ ನಿರ್ಮಿಸಬಯಸುವ ಸಮಾಜದ ಒಬ್ಬೊಬ್ಬ ವ್ಯಕ್ತಿಯನ್ನು ಅದು ನಮಾಝಿನ ಮೂಲಕ ಈ ರೀತಿ ಸಿದ್ಧಪಡಿಸುತ್ತದೆ. ಹತ್ತು ವರ್ಷ ಪ್ರಾಯದ ಬಳಿಕ ಈ ಸಮಾಜದ ಪ್ರತಿಯೊಬ್ಬ ಬಾಲಕ ಬಾಲಕಿಯ ಮೇಲೆ ನಮಾಝನ್ನು ಕಡ್ಡಾಯಗೊಳಿಸಲಾಗಿದೆ. ಈ ನಿರ್ಬಂಧ ಯಾವ ಸಂದರ್ಭದಲ್ಲೂ ರದ್ದಾಗುವುದಿಲ್ಲ. ಪ್ರಜ್ಞಾ ಹೀನತೆಯ ಸ್ಥಿತಿಯಲ್ಲಿ ಅಥವಾ ಸ್ತ್ರೀಯರಿಗೆ ಮುಟ್ಟು ಮತ್ತು ಪ್ರಸವೋತ್ತರ ಸ್ರಾವದ ಸಂದರ್ಭದಲ್ಲಿ ಮಾತ್ರ ಅದಕ್ಕೆ ವಿನಾಯಿತಿ ಇದೆ. ರೋಗ, ಯಾತ್ರೆ, ಯುದ್ಧ ಸನ್ನಾಹದಂತಹ ಸಂದರ್ಭಗಳಲ್ಲೂ ಈ ಕರ್ತವ್ಯವನ್ನು ನಿಭಾಯಿಸಬೇಕಾಗಿದೆ. ಏಳಲಾಗದಿದ್ದರೆ ಕುಳಿತು ಅದನ್ನು ನಿರ್ವಹಿಸಬೇಕು. ಕುಳಿತುಕೊಳ್ಳಲೂ ಸಾಧ್ಯವಿಲ್ಲದಿದ್ದರೆ ಮಲಗಿಕೊಂಡು ಅದನ್ನು ನಿರ್ವಹಿಸಬೇಕು. ಕೈ-ಕಾಲು ಅಲುಗಾಡದಿದ್ದರೆ ಸನ್ನೆಯ ಮೂಲಕ ನಿರ್ವಹಿಸಬೇಕು. ನೀರು ದೊರೆಯದಿದ್ದರೆ ಮಣ್ಣಿನಲ್ಲಿ ತಯಮ್ಮುಮ್ ಮಾಡಿ ನಿರ್ವಹಿಸಬೇಕು. ಕಿಬ್ಲಾದ ದಿಕ್ಕು ಗೊತ್ತಿರದಿದ್ದರೆ, ಗುಮಾನಿಯಿರುವೆಡೆಗೆ ಅಭಿಮುಖವಾಗಿ ನಿರ್ವಹಿಸಬೇಕು. ಒಟ್ಟಿನಲ್ಲಿ ಈ ನಿಟ್ಟಿನಲ್ಲಿ ಯಾವ ನೆವನವೂ ಸ್ವೀಕಾರಾರ್ಹವಲ್ಲ. ನಮಾಝ್‌ನ ಹೊತ್ತು ಆಸನ್ನವಾದರೆ ಎಲ್ಲ ಸ್ಥಿತಿಯಲ್ಲೂ ಮುಸಲ್ಮಾನನ ಮೇಲೆ ಅದರ ನಿರ್ವಹಣೆ ಕಡ್ಡಾಯವಾಗಿದೆ.

ಇಸ್ಲಾಮಿನ ಹೊರತು ಲೋಕದ ಯಾವುದೇ ಸಾಮೂಹಿಕ ವ್ಯವಸ್ಥೆಯಲ್ಲೂ ತನ್ನ ಪ್ರತಿಯೊಂದು ಅಂಗವನ್ನು ಅರ್ಥಾತ್ ತನ್ನ ಜನಕೂಟದ ಪ್ರತಿಯೊಂದು ವ್ಯಕ್ತಿಗಳನ್ನು ವೈಯಕ್ತಿಕವಾಗಿ ಸಿದ್ಧಪಡಿಸುವಂತಹ ಸಮಗ್ರ ವ್ಯವಸ್ಥೆಯೊಂದು ಅಸ್ತಿತ್ವದಲ್ಲಿಲ್ಲ. ಇದು ನಿರಾಕರಿಸಲಾಗದ ಸತ್ಯವಾಗಿದೆ. ಲೋಕದ ಇತರ ಸಾಮೂಹಿಕ ವ್ಯವಸ್ಥೆಗಳಲ್ಲಿ ಸಮೂಹದ ಸಂಘಟನಾ ವ್ಯವಸ್ಥೆಯನ್ನು ರೂಪಿಸಲು ಮತ್ತು ಬಾಹ್ಯಬಂಧನಗಳ ಮೂಲಕ ವ್ಯಕ್ತಿಗಳನ್ನು ಒಟ್ಟು ಸೇರಿಸಲು ಸಂಪೂರ್ಣ ಒತ್ತುಕೊಡಲಾಗಿದೆ. ಆದರೆ ಸಮೂಹದ ಒಂದೊಂದು ಅಂಗವನ್ನು ಆಂತರಿಕವಾಗಿ ಸಿದ್ಧಪಡಿಸುವ ಮತ್ತು ಸಮೂಹದ ತತ್ವಗಳಿಗೆ ಅವರನ್ನು ಬದ್ಧಗೊಳಿಸುವ ಪ್ರಯತ್ನವನ್ನು ಮಾಡಲಾಗುವುದಿಲ್ಲ. ನಿಜವಾಗಿ ಸಮೂಹದ ಸ್ಥಿತಿ ಒಂದು ಗೋಡೆಯಂತಿದೆ. ಗೋಡೆಯನ್ನು ಇಟ್ಟಿಗೆಗಳಿಂದ ನಿರ್ಮಿಸಲಾಗುತ್ತದೆ. ಗೋಡೆಯ ಪ್ರತಿಯೊಂದು

ಇಟ್ಟಿಗೆಯೂ ಭದ್ರವಾಗಿರದಿದ್ದರೆ ಗೋಡೆಯ ಸ್ಥಿತಿಯೂ ಸುಭದ್ರವಾಗಿರುವುದಿಲ್ಲ.. ಹಾಗೆಯೇ ವ್ಯಕ್ತಿಗಳ ಚಾರಿತ್ರ್ಯ ದುರ್ಬಲವಾಗಿದ್ದರೆ, ಅವರ ವಿಚಾರಗಳು ಸಂಘಟನಾತ್ಮಕ ತತ್ವಗಳಿಗೆ ಅನುಗುಣವಾಗಿರದಿದ್ದರೆ, ಪ್ರಾಯೋಗಿಕವಾಗಿ ಸಂಘಟನೆಗೆ ವಿರುದ್ಧವಾಗಿ ನಡೆಯುವಂತಹ ಪ್ರವೃತ್ತಿ ಅವರಲ್ಲಿದ್ದರೆ, ಆಗ ಕೇವಲ ಬಾಹ್ಯ ಬಂಧನಗಳಿಂದ ಸಮೂಹ ವ್ಯವಸ್ಥೆಯನ್ನು ಹೆಚ್ಚು ದಿನ ಕಾಯ್ದಿರಿಸಲು ಸಾಧ್ಯವಿಲ್ಲ. ಕೊನೆಗೆ ದಂಗೆ ತಲೆದೋರುತ್ತದೆ ಮತ್ತು ಸಮೂಹ ವ್ಯವಸ್ಥೆ ನುಚ್ಚುನೂರಾಗಿ ಬಿಡುತ್ತದೆ.

## ಸಂಘಟನೆಯ ರೂಪೀಕರಣ

ಇನ್ನು ನಾವು ನಮಾಝಿನ ಇನ್ನೊಂದು ಮುಖದ ಕಡೆಗೆ ಗಮನ ಹರಿಸೋಣ. ಸಮೂಹದ ಚಾರಿತ್ರ್ಯವೂ ವೈಯಕ್ತಿಕ ಚಾರಿತ್ರ್ಯಕ್ಕೆ ಅನುರೂಪವಾಗಿರದಿದ್ದರೆ ಕೇವಲ ವೈಯಕ್ತಿಕ ಚಾರಿತ್ರ್ಯ ಯಾವ ಪರಿಣಾಮವನ್ನೂ ಬೀರಲಾರದು. ವ್ಯಕ್ತಿ ತನ್ನ ಪರಮೋದ್ದೇಶವನ್ನು ಸಾಧಿಸಬೇಕಾದರೆ ಅವನ ಜತೆ ವಾಸಿಸುತ್ತಿರುವವರು ಆ ಪರಮೋದ್ದೇಶದ ಸಾಧನೆಗೆ ಅವನ ಜತೆ ಸಹಕರಿಸಬೇಕಾಗಿದೆ. ವ್ಯಕ್ತಿ ಯಾವ ತತ್ವಗಳ ಮೇಲೆ ವಿಶ್ವಾಸವಿರಿಸುತ್ತಾನೋ ಅದರಂತೆ ನಡೆಯಲು ಸಮಸ್ತ ಸಾಮೂಹಿಕ ಜೀವನ ಆ ತತ್ವಗಳ ಆಧಾರದಲ್ಲಿ ನೆಲೆನಿಂತಿರಬೇಕಾದುದು ಅನಿವಾರ್ಯವಾಗಿದೆ. ವ್ಯಕ್ತಿ ಲೋಕದಲ್ಲಿ ಒಬ್ಬಂಟಿಯಾಗಿ ಜನ್ಮತಾಳಿಲ್ಲ. ಒಬ್ಬಂಟಿಯಾಗಿ ಜೀವನ ಸಾಗಿಸಲಿಕ್ಕೂ ಅವನಿಗೆ ಸಾಧ್ಯವಲ್ಲ. ಅವನ ಸಮಸ್ತ ಜೀವನ ತನ್ನ ಸೋದರರು, ಮಿತ್ರರು, ಸಹವರ್ತಿಗಳು, ವ್ಯವಹಾರ ಸಂಬಂಧಿಗಳು ಮತ್ತು ಜೀವನದ ಅಸಂಖ್ಯ ಸಂಗಾತಿಗಳ ಜತೆ ಸಾವಿರಾರು ರೀತಿಯ ಸಂಬಂಧಗಳಲ್ಲಿ ಬೆಸೆದುಕೊಂಡಿದೆ. ಈ ಸಾಮೂಹಿಕ ಜೀವನ ಮತ್ತು ಸಾಮಾಜಿಕ ಸಂಬಂಧಗಳಲ್ಲಿ ದೇವನ ನಿಯಮಗಳನ್ನು ಜಾರಿಗೊಳಿಸಲಿಕ್ಕಾಗಿಯೇ ಅವನು ದೇವನ ವತಿಯಿಂದ ನಿಯೋಜಿಸಲ್ಪಟ್ಟಿದ್ದಾನೆ. ಈ ಕಾನೂನಿನಂತೆ ವರ್ತಿಸುವ ಮತ್ತು ಅದನ್ನು ಜಾರಿಗೊಳಿಸುವುದರ ಹೆಸರೇ 'ಇಬಾದತ್' ಅಥವಾ ದಾಸ್ಯೋಪಾಸನೆಯಾಗಿದೆ. ವ್ಯಕ್ತಿ ಈ ಕಾನೂನುಗಳನ್ನು ಸಮ್ಮತಿಸದಂತಹ, ಅಥವಾ ಸಾರಾಸಗಟಾಗಿ ಅದನ್ನು ವಿರೋಧಿಸುವಂತಹ ಅಥವಾ ಅದನ್ನು ಜಾರಿಗೊಳಿಸಲು ಪರಸ್ಪರ ಸಹಕರಿಸಲು ಸಿದ್ಧರಿಲ್ಲದಂತಹ ಜನರ ನಡುವೆ ಸಿಲುಕಿಕೊಂಡಿದ್ದಾನೆಂದು ಭಾವಿಸಿಕೊಳ್ಳಿ. ಅಂತಹ ಪರಿಸ್ಥಿತಿಯಲ್ಲಿ ವ್ಯಕ್ತಿ ಒಬ್ಬಂಟಿಯಾಗಿ ತನ್ನ ಜೀವನದಲ್ಲೂ ಅದನ್ನು ಪಾಲಿಸಲಾರ. ಇನ್ನು ಸಾಮೂಹಿಕ ಜೀವನದಲ್ಲಿ ಅದನ್ನು ಜಾರಿಗೊಳಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಅಲ್ಲದೆ ಮುಸ್ಲಿಮನ ಪಾಲಿಗೆ ಈ ಲೋಕ ಕಠಿಣ ಶ್ರಮ, ಸ್ಪರ್ಧೆ, ಸಂಘರ್ಷ ಮುಂತಾದವುಗಳ ಕರ್ಮ ರಂಗವಾಗಿದೆ. ಇಲ್ಲಿ ದೇವನ ವಿರುದ್ಧ ಬಂಡೆದ್ದವರ ಅನೇಕ ಬೃಹತ್ ಬಣಗಳಿವೆ. ಅವರು ಮಾನವ ಜೀವನದಲ್ಲಿ ಸ್ವಯಂಕೃತ ಕಾನೂನುಗಳನ್ನು ಪ್ರಬಲವಾಗಿ ಜಾರಿಗೊಳಿಸುತ್ತಿದ್ದಾರೆ. ಅವರಿಗೆ ಪ್ರತಿಯಾಗಿ ಮುಸ್ಲಿಮರ ಮೇಲೂ ಅತ್ಯಂತ ಭಾರವಾದ, ಸೊಂಟ ಮುರಿಯುವಂತಹ ಹೊಣೆಗಾರಿಕೆಯನ್ನು ವಹಿಸಲಾಗಿದೆ, ಇಲ್ಲಿ ದೇವನ ಕಾನೂನುಗಳನ್ನು ಪ್ರಚಾರ ಪಡಿಸುವುದು, ಜಾರಿಗೊಳಿಸುವುದು, ಮಾನವ ನಿರ್ಮಿತ ಕಾನೂನುಗಳನ್ನು

ಎಲ್ಲೆಡೆಯಿಂದ ಅಳಿಸುವುದು, ಅದರ ಜಾಗದಲ್ಲಿ ಏಕೈಕನೂ ಸಹಭಾಗಿಗಳಿಲ್ಲದವನೂ ಆದ ಅಲ್ಲಾಹನ ಕಾನೂನು ಮತ್ತು ಆಡಳಿತವನ್ನು ಜಾರಿಗೊಳಿಸುವುದೇ ಈ ಮಹತ್ತರ ಹೊಣೆಗಾರಿಕೆ. ಮುಸ್ಲಿಮರಿಗೆ ವಹಿಸಲಾಗಿರುವ ಈ ಘನ ಜವಾಬ್ದಾರಿಕೆಯನ್ನು ಬಂಡುಕೋರ ಬಣಗಳ ವಿರುದ್ಧ ಒಬ್ಬ ಮುಸ್ಲಿಮನಿಗೆ ನಿಭಾಯಿಸಲು ಸಾಧ್ಯವಿಲ್ಲ. ಲೋಕದಲ್ಲಿ ಕೋಟಿಗಟ್ಟಲೆ ಮುಸ್ಲಿಮರಿದ್ದು, ಅವರು ಪ್ರತ್ಯೇಕವಾಗಿ ವೈಯಕ್ತಿಕ ನೆಲೆಯಲ್ಲಿ ಎಷ್ಟು ಪ್ರಯತ್ನಿಸಿದರೂ ಎದುರಾಳಿಗಳ ಸುವ್ಯವಸ್ಥಿತ ಶಕ್ತಿಯ ವಿರುದ್ಧ ಜಯಿಸಲು ಅವರಿಗೆ ಸಾಧ್ಯವಿಲ್ಲ. ಆದ್ದರಿಂದ ದೇವನ ದಾಸ್ಯೋಪಾಸನೆ ಕೈಗೊಳ್ಳಬಯಸುವವರೆಲ್ಲರೂ ಒಂದು ಗುಂಪಾಗಿ ಮಾರ್ಪಡಬೇಕಾಗಿದೆ. ಅವರು ಪರಸ್ಪರ ಸಹಕರಿಸುವವರೂ ಬೆಂಬಲ ಕೊಡುವವರೂ ಆಗಿ ಮಾರ್ಪಡಬೇಕು ಮತ್ತು ಉದ್ದೇಶಸಾಧನೆಗೆ ಎಲ್ಲರೂ ಸೇರಿ ಹೋರಾಡುವುದು ಅನಿವಾರ್ಯವಾಗಿದೆ.

ಈ ಎರಡು ಉದ್ದೇಶಗಳಿಗಾಗಿ ಮುಸ್ಲಿಮರು ಪರಸ್ಪರ ಒಟ್ಟು ಸೇರಿದರೆ ಮಾತ್ರ ಸಾಲದು, ಬದಲಾಗಿ ಅವರ ಸಂಘಟನೆ ಸರಿಯಾದ ರೀತಿಯಲ್ಲಾಗಬೇಕು. ಕೇವಲ ಸಾಮೂಹಿಕ ವ್ಯವಸ್ಥೆಯನ್ನು ರೂಪಿಸಿದರೆ ಸಾಲದು, ಬದಲಾಗಿ ಸಚ್ಚರಿತ ಸಾಮೂಹಿಕ ವ್ಯವಸ್ಥೆಯನ್ನು ರೂಪಿಸಬೇಕು. ಅದರಲ್ಲಿ ಮುಸ್ಲಿಮರ ನಡುವಿನ ಪರಸ್ಪರ ಸಂಬಂಧ ಇಸ್ಲಾಮ್ ಬಯಸುವಂತಹ ರೀತಿಯಲ್ಲಿರಬೇಕು. ಅವರ ನಡುವೆ ಸಮಾನತೆ, ಸೌಹಾರ್ದ, ಸಹಾನುಭೂತಿಗಳಿರಬೇಕು. ಅವರೆಲ್ಲರೂ ಒಂದೇ ಉದ್ದೇಶಕ್ಕಾಗಿ ಕೆಲಸ ಮಾಡುವವರಾಗಬೇಕು. ದೇವನ ದಾಸ್ಯೋಪಾಸನೆ ಕೈಗೊಳ್ಳುವ ಸಮಾನ ಆಸಕ್ತಿ ಅವರೆಲ್ಲರಲ್ಲಿರಬೇಕು. ಅವರೆಲ್ಲರೂ ನಿರಂತರ ಸಕ್ರಿಯರಾಗಿರಬೇಕು. ಸಾಮೂಹಿಕ ಪ್ರಯತ್ನವೇ ಅವರ ಜಾಯಮಾನವಾಗಿ ಮಾರ್ಪಡಬೇಕು. ಅವರ ಪೈಕಿ ಪ್ರತಿಯೊಬ್ಬರಿಗೂ ತಾನು ನಾಯಕನಾದರೆ ಸಂಘಟನೆಯೊಂದಿಗೆ ತನ್ನ ಧೋರಣೆ ಹೇಗಿರಬೇಕು ಎಂದು ತಿಳಿದಿರಬೇಕು. ಅದೇ ರೀತಿ ಇತರರು ನಾಯಕರಾದರೆ ಹೇಗೆ ಅನುಸರಣೆ ಕೈಗೊಳ್ಳಬೇಕೆಂದೂ ತಿಳಿದಿರಬೇಕು. ಅವರ ಆಜ್ಞೆಯನ್ನು ಹೇಗೆ ಪಾಲಿಸಬೇಕು, ಅವರ ಅನುಸರಣೆ ಎಷ್ಟರ ಮಟ್ಟಿಗೆ ಕಡ್ಡಾಯ, ಎಲ್ಲಿ ಅವರನ್ನು ತಡೆಯಬೇಕು, ಯಾವ ಹಂತದಲ್ಲಿ ಅವರ ಅನುಸರಣೆ ಕಡ್ಡಾಯವಲ್ಲ ಎಂಬುದು ತಿಳಿದಿರಬೇಕು.

## ಸಾಮೂಹಿಕ ನಮಾಝ್

ನಮಾಝ್ ವೈಯಕ್ತಿಕ ಚಾರಿತ್ರ್ಯ ನಿರ್ಮಾಣದ ಜತೆಗೆ ಸಾಮೂಹಿಕ ವ್ಯವಸ್ಥೆಯ ಸಮಸ್ತ ರೂಪರೇಷೆಯನ್ನೂ ಸಿದ್ಧಪಡಿಸುತ್ತದೆ. ಅದನ್ನು ಸ್ಥಾಪಿಸುತ್ತದೆ ಮತ್ತು ನಿರಂತರ ನೆಲೆನಿಲ್ಲುವಂತೆ ಮಾಡುತ್ತದೆ. ದಿನದಲ್ಲಿ ಐದು ಹೊತ್ತು ಅದನ್ನು ಸಕ್ರಿಯಗೊಳಿಸಿ ಅದೊಂದು ಯಂತ್ರದಂತೆ ನಿರಂತರ ಕಾರ್ಯತತ್ಪರವಾಗಿರುವಂತೆ ಮಾಡುತ್ತದೆ. ಆದ್ದರಿಂದ ಐದು ಹೊತ್ತಿನ ನಮಾಝನ್ನು ಸಾಮೂಹಿಕವಾಗಿ ನಿರ್ವಹಿಸುವುದನ್ನು ಕಡ್ಡಾಯಗೊಳಿಸಲಾಗಿದೆ. ಶರೀಅತ್‌ನ ಪ್ರಕಾರ ಪ್ರತಿಯೊಬ್ಬ ವ್ಯಕ್ತಿ ಪ್ರತ್ಯೇಕವಾಗಿ ನಮಾಝ್ ನಿರ್ವಹಿಸಿ ಹೊಣೆ ಮುಕ್ತನಾಗಬಹುದು. ಆದರೆ ಯಾವುದೇ ಕಾರಣವಿಲ್ಲದೆ ಮಸೀದಿಗೆ ಬಂದು ಸಾಮೂಹಿಕವಾಗಿ ನಮಾಝ್ ನಿರ್ವಹಿಸದಿರುವುದು ಪಾಪವೆನ್ನಲಾಗಿದೆ.

ಹೀಗೆ ಸಾಮೂಹಿಕ ನಮಾಝಿನ ತಾಕೀತು ಮಾಡಲಾಗಿರುವುದರ ಉದ್ದೇಶವೇ ಮುಸ್ಲಿಮರ ಸಾಮೂಹಿಕ ವ್ಯವಸ್ಥೆ ಸರಿಯಾದ ರೂಪದಲ್ಲಿ ಕ್ರಿಯಾಶೀಲವಾಗಿರಬೇಕೆಂಬುದಾಗಿದೆ. ಈ ತಳಪಾಯ ಭದ್ರವಾಗಿದ್ದರೆ ಸಮಸ್ತ ಸಾಮೂಹಿಕ ವ್ಯವಸ್ಥೆ ಭದ್ರವಾಗಿರುತ್ತದೆ. ಇದು ದುರ್ಬಲವಾದರೆ ಸಾಮೂಹಿಕ ವ್ಯವಸ್ಥೆಯೂ ಛಿನ್ನಭಿನ್ನವಾಗಿ ಬಿಡುತ್ತದೆ.

## ಅದಾನ್

'ಅದಾನ್'ನ ಸ್ವರ ಕೇಳುತ್ತಲೇ ಎದ್ದೇಳಿ ಮತ್ತು ತಂತಮ್ಮ ಕೆಲಸ ತೊರೆದು ಮಸೀದಿಯೆಡೆಗೆ ಧಾವಿಸಿ ಎಂದು ಆದೇಶಿಸಲಾಗಿದೆ. ಈ ಕರೆಯುವವನ ಕರೆಗೆ ಓಗೊಟ್ಟು ಮುಸ್ಲಿಮರೆಲ್ಲರೂ ಎಲ್ಲೆಡೆಯಿಂದ ಒಂದು ಕೇಂದ್ರದೆಡೆಗೆ ಧಾವಿಸುವುದು ಸೈನ್ಯ ಸದೃಶ ಚಲನೆಯಾಗಿದೆ. ಸೈನ್ಯದ ಸಿಪಾಯಿಗಳು ಎಲ್ಲೇ ಇದ್ದರೂ ಸೀಟಿಯ ಶಬ್ದ ಕೇಳುತ್ತಲೇ ತಮ್ಮ ದಂಡನಾಯಕ ತಮ್ಮನ್ನು ಕರೆಯುತ್ತಿದ್ದಾನೆ ಎಂದು ಅರಿಯುತ್ತಾರೆ. ಈ ಕರೆ ಕೇಳುತ್ತಲೇ ಎಲ್ಲರ ಮನಸ್ಸಿನಲ್ಲಿ ಒಂದೇ ರೀತಿಯ ಭಾವನೆ ಬೆಳೆಯುತ್ತದೆ. ದಂಡನಾಯಕನ ಅನುಸರಣೆಯ ಸಮಾನ ಭಾವನೆ. ಈ ಭಾವನೆ ಮೊಳೆಯುತ್ತಲೇ ಎಲ್ಲರೂ ಒಂದೇ ಕೆಲಸಕ್ಕೆ ಅಣಿಯಾಗುತ್ತಾರೆ. ಅರ್ಥಾತ್ ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಬಿಟ್ಟು ಏಳುತ್ತಾರೆ. ಎಲ್ಲ ಕಡೆಯಿಂದ ಸರಿದು ಒಂದೆಡೆ ಸೇರುತ್ತಾರೆ, ಸೇನೆಯಲ್ಲಿ ಈ ವಿಧಾನವನ್ನು ಅನುಸರಿಸುವುದರ ಉದ್ದೇಶವೇನು? ಮೊದಲನೆಯದಾಗಿ ಸೈನಿಕರಲ್ಲಿ ವೈಯಕ್ತಿಕವಾಗಿ ಆಜ್ಞಾಪಾಲನೆ ಮಾಡುವ ಮತ್ತು ಸಕ್ರಿಯವಾಗಿ ಕೆಲಸ ಮಾಡುವ ಅಭ್ಯಾಸ ಬೆಳೆಯಬೇಕು. ಅಂತಹ ಅನುಸರಣಶೀಲ ಸೈನಿಕರಿಂದ ಕೂಡಿದ ಒಂದು ಬಣ ಮತ್ತು ತುಕಡಿ ನಿರ್ಮಾಣವಾಗಬೇಕು. ದಂಡನಾಯಕನ ಆದೇಶ ಬಂದ ಕೂಡಲೇ ಒಂದೇ ಸಮಯಕ್ಕೆ ಎಲ್ಲರೂ ಒಂದೆಡೆ ಸೇರುವಂತಹ ಅಭ್ಯಾಸ ಅವರಲ್ಲಿ ಬೆಳೆಯಬೇಕು. ಯಾವುದೇ ಕಾರ್ಯಾಚರಣೆ ಮಾಡಬೇಕಾಗಿ ಬಂದಾಗ ಸಮಸ್ತ ಸೇನೆ ಒಂದೇ ಕರೆಗೆ ಏಕ ಉದ್ದೇಶಕ್ಕಾಗಿ ಸಂಘಟಿತರಾಗಿ ಕಾರ್ಯ ಪ್ರವೃತ್ತರಾಗಲು ಆ ಮೂಲಕ ಸಾಧ್ಯವಾಗಬೇಕು. ಸೈನಿಕ ಭಾಷೆಯಲ್ಲಿ ಇದನ್ನೇ ಜಮಾವಣೆ (Mobility) ಎನ್ನಲಾಗುತ್ತದೆ. ಇದು ಸೈನಿಕ ಜೀವನದ ಉಸಿರಾಗಿದೆ. ಯಾವುದೇ ಸೈನ್ಯದಲ್ಲಿ ಇಂತಹ ಜಮಾವಣೆಯ ಗುಣವಿಲ್ಲದಿದ್ದರೆ, ಅದರ ಸೈನಿಕರು ತಾವಿಚ್ಛಿಸಿದಲ್ಲಿಗೆ ಸರಿಯುವಂತಹ ಸ್ವೇಚ್ಛಾಚಾರಿಗಳಾಗಿದ್ದರೆ, ಅವರಿಗೆ ಯಾವುದೇ ಕಾರ್ಯಾಚರಣೆಯಲ್ಲಿ ಸಾಫಲ್ಯ ಸಾಧಿಸಲು ಸಾಧ್ಯವಿಲ್ಲ. ಅವರ ಪೈಕಿ ಒಬ್ಬೊಬ್ಬ ಸೈನಿಕರು ಭೀಮಕಾಯಉಳ್ಳವರಾಗಿದ್ದರೂ ಸರಿಯೇ? ಇಂತಹ ಸಾವಿರ ವೀರ ಕಲಿಗಳನ್ನು ಶತ್ರುಗಳ ಐವತ್ತು ಸೈನಿಕರ ಸುಸಂಘಟಿತ ತುಕಡಿ ಒಬ್ಬೊಬ್ಬರಂತೆ ಹಿಡಿದು ಸದೆಬಡಿಯಬಲ್ಲುದು.

ಇದೇ ಯುಕ್ತಿಯ ಆಧಾರದಲ್ಲಿ ಮುಸ್ಲಿಮರು ಎಲ್ಲಿ 'ಅದಾನ್'ನ ಸ್ವರ ಕೇಳಿದರೂ, ತಕ್ಷಣ ತಮ್ಮೆಲ್ಲಾ ಕೆಲಸಗಳನ್ನು ಬಿಟ್ಟು, ತನ್ನ ಸಮೀಪದ ಮಸೀದಿಯೆಡೆಗೆ ಧಾವಿಸಬೇಕು ಎಂಬ ನಿಯಮವನ್ನು ಗೊತ್ತುಪಡಿಸಲಾಗಿದೆ. ಈ ಜಮಾವಣೆಯ ಅಭ್ಯಾಸವನ್ನು ಅವರಿಗೆ ದಿನದ ಐದು ಹೊತ್ತು ಮಾಡಿಸಲಾಗುತ್ತಿದೆ. ಏಕೆಂದರೆ ಈ ದೈವಿಕ ಸೇನೆಗೆ ಲೋಕದ ಇತರೆಲ್ಲ

ಸೇನೆಗಳಿಗಿಂತಲೂ ಕಠಿಣತಮವಾದ ಕರ್ತವ್ಯವಿದೆ. ಆ ಕೆಲಸದ ಬಗ್ಗೆ ಈಗಾಗಲೇ ಪ್ರಸ್ತಾವಿಸಲಾಗಿದೆ. ಇತರ ಸೈನಿಕರಿಗೆ ಎಂದಾದರೊಮ್ಮೆ ಯಾವುದಾದರೊಂದು ಕಾರ್ಯಾಚರಣೆ ಮಾಡಬೇಕಾಗಿ ಬರುತ್ತದೆ. ಅದಕ್ಕಾಗಿ ಅವರಿಗೆ ಈ ಎಲ್ಲಾ ಸೈನಿಕ ಕವಾಯಿತುಗಳನ್ನು ಮಾಡಿಸಲಾಗುತ್ತದೆ. ಆದರೆ ಈ ದೈವಿಕ ಸೈನ್ಯಕ್ಕೆ ನಿತ್ಯವೂ ಯಾವುದಾದರೊಂದು ಕಾರ್ಯಾಚರಣೆಗೆ ಅಣಿಯಾಗಬೇಕಾಗಿದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ದಿನದಲ್ಲಿ ಕೇವಲ ಐದು ಬಾರಿ ದೈವಿಕ ಕರೆಯ ಶಬ್ದದೆಡೆಗೆ ಧಾವಿಸುವ ಮತ್ತು ಮಸೀದಿಯೆಂಬ ದೈವಿಕ ಸೇನಾ ಶಿಬಿರದಲ್ಲಿ ಜಮಾವಣೆಯಾಗಲು ಆದೇಶ ನೀಡಲಾಗಿರುವುದೇ ಒಂದು ರಿಯಾಯಿತಿಯಾಗಿದೆ.

## ಮಸೀದಿಯಲ್ಲಿ ಸಮಾವೇಶ

ಈ ವರೆಗೆ ವಿವರಿಸಿದ ಪ್ರಯೋಜನಗಳು ಕೇವಲ 'ಅಧಾನ್'ಗೆ ಸಂಬಂಧಿಸಿದ್ದಾಗಿದೆ. ಇನ್ನು ನೀವು ಮಸೀದಿಯಲ್ಲಿ ಒಟ್ಟು ಸೇರುತ್ತೀರಿ. ಹೀಗೆ ಸೇರುವುದರಲ್ಲೇ ಅನೇಕ ಪ್ರಯೋಜನಗಳಿವೆ. ಅಲ್ಲಿ ನೀವು ಪರಸ್ಪರ ನೋಡುತ್ತೀರಿ, ಪರಿಚಿತರಾಗುತ್ತೀರಿ, ಒಬ್ಬರನ್ನೊಬ್ಬರು ಅರಿಯುತ್ತೀರಿ. ಹೀಗೆ ನೋಡುವುದು, ಅರಿಯುವುದು ಮತ್ತು ಪರಿಚಿತರಾಗುವುದು ಯಾವ ನೆಲೆಯಲ್ಲಾಗಿದೆ. ಎಲ್ಲರೂ ಒಬ್ಬನೇ ದೇವನ ದಾಸರು, ಒಂದೇ ಪ್ರವಾದಿಯ ಹಿಂಬಾಲಕರು, ಏಕ ಗ್ರಂಥದ ಪಾಲಕರು ಮತ್ತು ಏಕೈಕ ಉದ್ದೇಶದ ವಾಹಕರು ಎಂಬ ನೆಲೆಯಲ್ಲಿ ನಿಮ್ಮ ಭೇಟಿಯಾಗುತ್ತದೆ. ಈ ಉದ್ದೇಶಕ್ಕಾಗಿಯೇ ನೀವು ಮಸೀದಿಯಲ್ಲಿ ಜಮಾಯಿಸಿದ್ದೀರಿ. ಈ ಉದ್ದೇಶಕ್ಕಾಗಿ ಮಸೀದಿಯ ಹೊರಗೂ ನೀವು ಸಕ್ರಿಯರಾಗಿರಬೇಕಾಗಿದೆ. ಈ ರೀತಿಯ ಪರಿಚಯ ಸ್ವತಃ ನಿಮ್ಮಲ್ಲಿ ನೀವೆಲ್ಲರೂ ಒಂದೇ ಸಮುದಾಯಕ್ಕೆ ಸೇರಿದವರು, ಒಂದೇ ಸೇನೆಯ ಸಿಪಾಯಿಗಳು, ಪರಸ್ಪರ ಸೋದರರು ಮತ್ತು ಸ್ನೇಹಿತರು ಎಂಬ ಭಾವನೆಯನ್ನು ಬೆಳೆಸುತ್ತದೆ. ಈ ಲೋಕದಲ್ಲಿ ನಿಮ್ಮ ಹಿತಾಸಕ್ತಿ, ಧ್ಯೇಯ, ಲಾಭ-ನಷ್ಟಗಳೆಲ್ಲವೂ ಸಮಾನವಾಗಿವೆ. ನಿಮ್ಮ ಜೀವನ ಪರಸ್ಪರ ಹೊಂದಿಕೊಂಡಿದೆ. ನಿಮ್ಮ ಏಳು-ಬೀಳುಗಳೂ ಸಮನ್ವಯವಾಗಿದೆ ಎಂಬ ಭಾವನೆಯನ್ನು ಹುಟ್ಟಿಸುತ್ತದೆ.

ಇನ್ನು ನೀವು ಪರಸ್ಪರ ನೋಡುವಾಗಲೂ ಸಹಜವಾಗಿಯೇ ಪರಸ್ಪರ ನೋಡುವುದು ವೈರತ್ವದ ಭಾವನೆಯಿಂದಲ್ಲ ಬದಲಾಗಿ ಸ್ನೇಹ-ಸೋದರತೆಯ ಭಾವನೆಯಿಂದಾಗಿರುತ್ತದೆ. ಈ ದೃಷ್ಟಿಯಿಂದ ನೀವು ನೋಡುವಾಗ ನಿಮ್ಮ ಸೋದರನೊಬ್ಬ ಹರಕು-ಮುರುಕು ಬಟ್ಟೆಯಲ್ಲಿರುವುದನ್ನು, ಇನ್ನೊಬ್ಬ ಚಿಂತೆಗೀಡಾಗಿರುವುದನ್ನೂ ಮತ್ತೊಬ್ಬ ಹಸಿವಿನ ಮೋರೆ ಹೊತ್ತು ಬಂದಿರುವುದನ್ನು, ಮಗದೊಬ್ಬ ಅಂಗವಿಕಲ, ಕುಂಟ, ಕುರುಡನಾಗಿರುವುದನ್ನು ನೀವು ಕಾಣುತ್ತೀರಿ. ಆಗ ಸಹಜವಾಗಿಯೇ ನಿಮ್ಮ ಹೃದಯದಲ್ಲಿ ಸಹಾನುಭೂತಿಯ ಭಾವನೆ ಬೆಳೆಯುತ್ತದೆ. ನಿಮ್ಮ ಪೈಕಿ ಸುಭಿಕ್ಷೆಯಲ್ಲಿರುವವರು ಬಡವರ ಮತ್ತು ಅಶಕ್ತರ ಮೇಲೆ ಕರುಣೆ ತೋರುತ್ತಾರೆ. ದರಿದ್ರರು ಸಿರಿವಂತರ ಬಳಿಹೋಗಿ ತಮ್ಮ ಅಹವಾಲನ್ನು ಅವರ ಮುಂದಿಡುವ ಧೈರ್ಯವನ್ನು ತಮ್ಮಲ್ಲಿ ತಂದುಕೊಳ್ಳುತ್ತಾರೆ. ನಿರ್ದಿಷ್ಟ ವ್ಯಕ್ತಿ ರೋಗ ಅಥವಾ ಇನ್ನಾವುದೇ ತೊಂದರೆಯಿಂದ ಮಸೀದಿಗೆ ಬರಲಿಲ್ಲವೆಂದು ನಿಮಗೆ ತಿಳಿದಾಗ ನೀವು ಅವನ ಸಂದರ್ಶನಕ್ಕೆ

ಹೋಗುತ್ತೀರಿ. ಯಾರಾದರೂ ನಿಧನರಾದ ಸುದ್ದಿ ಕೇಳಿದರೆ ನೀವು ಅವನ ಅಂತ್ಯಕ್ರಿಯೆಯಲ್ಲಿ ಪಾಲ್ಗೊಳ್ಳುತ್ತೀರಿ, ಸಂತ್ರಪ್ತ ಆಪ್ತೇಷ್ಟರಿಗೆ ಸಾಂತ್ವನ ನೀಡುತ್ತೀರಿ. ಈ ಎಲ್ಲಾ ವಿಷಯಗಳು ಪರಸ್ಪರ ಪ್ರೀತಿಯನ್ನು ಹೆಚ್ಚಿಸುತ್ತದೆ. ಪರಸ್ಪರರನ್ನು ಹತ್ತಿರಗೊಳಿಸುತ್ತದೆ, ಹಾಗೆಯೇ ಪರಸ್ಪರರನ್ನು ಸಹಾಯಕರನ್ನಾಗಿ ಮಾಡುತ್ತದೆ.

ಇನ್ನು ಸ್ವಲ್ಪ ಆಲೋಚಿಸಿ ನೋಡಿ. ನೀವು ಇಲ್ಲಿ ಪರಿಶುದ್ಧ ಉದ್ದೇಶದಿಂದ ಒಟ್ಟು ಸೇರಿದ್ದೀರಿ. ಯಾವುದೇ ಚಲನಚಿತ್ರ ತಾರೆಯ ಮೋಹ ನಿಮ್ಮನ್ನು ಇಲ್ಲಿಗೆ ಎಳೆದು ತರಲಿಲ್ಲ. ಮದ್ಯಪಾನ ಅಥವಾ ಜೂಜಾಟಕ್ಕಾಗಿಯೂ ನೀವಿಲ್ಲಿ ಸೇರಿದ್ದಲ್ಲ. ಎಲ್ಲರ ಮನಸ್ಸಿನಲ್ಲೂ ದುರುದ್ದೇಶಗಳು ಮತ್ತು ದುಷ್ಟಸಂಕಲ್ಪಗಳು ತುಂಬಿರುವಂತಹ ದುಷ್ಕರ್ಮಿಗಳ ಸಮಾವೇಶವೂ ಅದಲ್ಲ.

ಇದು ದೇವನ ದಾಸರ ಸಮಾವೇಶವಾಗಿದೆ. ದೇವನ ಭವನದಲ್ಲಿ ದೇವನ ದಾಸ್ಯೋಪಾಸನೆ ಗೈಯ್ಯಲು ಮತ್ತು ದೇವನ ಮುಂದೆ ದಾಸ್ಯ ಪ್ರಕಟಣೆ ಮಾಡಲು ಎಲ್ಲರೂ ಜಮಾಯಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಸತ್ಯವಿಶ್ವಾಸಿಯ ಮನದಲ್ಲಿ ಮೊದಲೇ ತನ್ನ ಪಾಪಗಳ ಬಗ್ಗೆ ಸಂಕೋಚವಿರುತ್ತದೆ. ಇನ್ನು ಅವನು ತನ್ನ ಸೋದರನ ಉಪಸ್ಥಿತಿಯಲ್ಲಿ ಯಾವುದೇ ಪಾಪ ಮಾಡಿದ್ದರೆ ಮತ್ತು ಅವನೂ ಮಸೀದಿಯಲ್ಲಿ ಉಪಸ್ಥಿತನಿದ್ದರೆ, ಅವನು ಕಣ್ಣೆದುರಿಗಿರುವ ಮಾತ್ರಕ್ಕೆ ಇವನು ತನ್ನ ಮನಸ್ಸಿನ ಬೇಗುದಿಯಿಂದ ನೀರಾಗಿ ಹೋಗುತ್ತಾನೆ. ಇನ್ನು ಮುಸ್ಲಿಮರಲ್ಲಿ ಪರಸ್ಪರ ಉಪದೇಶಿಸುವಂತಹ ಸ್ಫೂರ್ತಿಯೂ ಇದೆ ಎಂದಾದರೆ ಹಾಗೂ ಸಹಾನುಭೂತಿ ಮತ್ತು ಪ್ರೀತಿಯಿಂದ ಪರಸ್ಪರ ಹೇಗೆ ಒಬ್ಬರನ್ನೊಬ್ಬರು ತಿದ್ದಬೇಕೆಂಬ ಹಂಬಲವೂ ಇದ್ದರೆ, ಆಗ ಖಂಡಿತವಾಗಿಯೂ ಮುಸ್ಲಿಮರ ಈ ಸಭೆ ಅತ್ಯಂತ ಮಂಗಳಮಯವಾದ ಸಭೆಯಾಗಿ ಪರಿಣಮಿಸುವುದು. ಹೀಗೆ ಮುಸ್ಲಿಮರು ಪರಸ್ಪರ ತಮ್ಮ ದೋಷಗಳನ್ನು ದೂರೀಕರಿಸುತ್ತಾರೆ. ಪರಸ್ಪರರ ದೌರ್ಬಲ್ಯಗಳ ಸುಧಾರಣೆ ಮಾಡುತ್ತಾರೆ. ಹೀಗೆ ಸಮಸ್ತ ಸಮೂಹ ಸಚ್ಚರಿತ ಸಮೂಹವಾಗಿ ಮಾರ್ಪಡುತ್ತದೆ.

## ಸಾಲುಗಟ್ಟುವುದು

ಇದು ಕೇವಲ ಮಸೀದಿಯಲ್ಲಿ ಒಟ್ಟು ಸೇರುವುದರಿಂದಾಗುವ ಪ್ರಯೋಜನಗಳಾಗಿವೆ. ಇನ್ನು ಸಾಮೂಹಿಕ ನಮಾಝ್ ನಿರ್ವಹಿಸುವುದರಲ್ಲಿ ಎಷ್ಟು ಸಮೃದ್ಧಿಗಳು ಅಡಕವಾಗಿದೆಯೆಂದು ಆಲೋಚಿಸಿ.

ಮುಸ್ಲಿಮರೆಲ್ಲರೂ ಮಸೀದಿಯಲ್ಲಿ ಸಮಾನ ನೆಲೆಯುಳ್ಳವರಾಗಿದ್ದಾರೆ. ಚಮ್ಮಾರನೊಬ್ಬ ಮೊದಲು ಬಂದರೆ ಅವನು ಮುಂದಿನ ಪಂಕ್ತಿಯಲ್ಲಿರುವನು. ಸರದಾರನೊಬ್ಬ ತಡವಾಗಿ ಬಂದರೆ ಹಿಂದಿನ ಪಂಕ್ತಿಯಲ್ಲಿರುವನು. ಎಷ್ಟು ದೊಡ್ಡ ವ್ಯಕ್ತಿಯಾದರೂ ಮಸೀದಿಯಲ್ಲಿ ತನ್ನ ಸ್ಥಾನವನ್ನು ಮೀಸಲುಗೊಳಿಸುವಂತಿಲ್ಲ. ಮಸೀದಿಯೊಳಗೆ ಯಾವುದೇ ಸ್ಥಳದಲ್ಲಿ ನಿಲ್ಲುವುದರಿಂದ ಯಾರನ್ನೂ ತಡೆಯುವ ಅಥವಾ ಅವನು ಇರುವ ಸ್ಥಳದಿಂದ ಅವನನ್ನು ಸರಿಸುವ ಹಕ್ಕು ಯಾರಿಗೂ ಇಲ್ಲ. ಜನರನ್ನು ದಾಟಿ ಅಥವಾ ಸಾಲುಗಳನ್ನು ಸೀಳಿ ಮುಂದೆ

ಹೋಗಲು ಪ್ರಯತ್ನಿಸುವ ಅಧಿಕಾರವೂ ಯಾರಿಗೂ ಇಲ್ಲ. ಮುಸ್ಲಿಮರೆಲ್ಲರೂ ಒಂದೇ ಸಾಲಿನಲ್ಲಿ ಸಮಾನ ನೆಲೆಯಲ್ಲಿ ನಿಲ್ಲಬೇಕಾಗುವುದು. ಅಲ್ಲಿ ಯಾರೂ ಮೇಲು-ಕೀಳೆಂಬ ಭಾವನೆಯಿಲ್ಲ. ಉಚ್ಚ ನೀಚತೆಯಿಲ್ಲ, ಅಸ್ಪೃಶ್ಯತೆಯ ಕಲ್ಪನೆಯಿಲ್ಲ, ಒಬ್ಬನ ನೇರಕ್ಕೆ ಇನ್ನೊಬ್ಬ ನಿಲ್ಲುವುದರಿಂದ ಯಾರ ಘನತೆಗೂ ಕುಂದುಂಟಾಗುವ ಪ್ರಶ್ನೆಯಿಲ್ಲ. ಕೇರಿಯ ಜಾಡಮಾಲಿ ಒಂದು ರಾಜ್ಯ ಪಾಲನ ನೇರಕ್ಕೆ ನಿಂತುಕೊಳ್ಳುತ್ತಾನೆ. ಇಂತಹ ಸಾಮಾಜಿಕ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಇಸ್ಲಾಮಿನ ವಿನಾ ಯಾವುದಕ್ಕೂ ಸಾಧ್ಯವಾಗಿಲ್ಲ. ಇಲ್ಲಿ ದಿನದಲ್ಲಿ ಐದು ಹೊತ್ತು ಸಮಾಜದ ವ್ಯಕ್ತಿಗಳಲ್ಲಿರುವ ಉಚ್ಚ-ನೀಚತೆಯನ್ನು ನಿವಾರಿಸಲಾಗುತ್ತದೆ. ದೊಡ್ಡವರ ಮಸ್ತಿಷ್ಕದಿಂದ ಹಿರಿತನದ ಜಂಭವನ್ನು ದೂರೀಕರಿಸಲಾಗುತ್ತದೆ. ಸಣ್ಣವರ ಮನದಿಂದ ಕೀಳರಿಮೆಯನ್ನು ಅಳಿಸಲಾಗುತ್ತದೆ. ದೇವನ ದೃಷ್ಟಿಯಲ್ಲಿ ನೀವೆಲ್ಲರೂ ಸಮಾನರು ಎಂದು ಎಲ್ಲರಿಗೂ ಮನವರಿಕೆ ಮಾಡಿಸಲಾಗುತ್ತದೆ.

ಈ ಪಂಕ್ತಿ ಬದ್ಧತೆಯು ವರ್ಗ ಪಕ್ಷಪಾತವನ್ನು ದೂರೀಕರಿಸುತ್ತದೆ. ಹಾಗೆಯೇ ವಂಶ, ಗೋತ್ರ, ರಾಷ್ಟ್ರ, ವರ್ಣ ಮುಂತಾದ ಪೂರ್ವಗ್ರಹಗಳನ್ನು ಅಳಿಸುತ್ತದೆ. ಮಸೀದಿಯಲ್ಲಿ ಯಾವುದೇ ವಿಶಿಷ್ಟ ಚಿಹ್ನೆಯ ಆಧಾರದಲ್ಲಿ ವಿವಿಧ ಮಾನವರ ವಲಯವಿರುವುದಿಲ್ಲ. ಮಸೀದಿಗೆ ಬರುವ ಮುಸ್ಲಿಮರೆಲ್ಲರೂ ಅವರು ಕರಿಯರಾಗಿರಲಿ ಅಥವಾ ಬಿಳಿಯರಾಗಿರಲಿ, ಏಶ್ಯನ್ನರಾಗಿರಲಿ ಅಥವಾ ಪಾಶ್ಚಾತ್ಯರಾಗಿರಲಿ, ದ್ರಾವಿಡರಾಗಿರಲಿ ಅಥವಾ ಆರ್ಯನ್ನರಾಗಿರಲಿ, ಅವರ ಗೋತ್ರ ಮತ್ತು ಭಾಷೆಗಳ ನಡುವೆ ಎಷ್ಟೇ ವ್ಯತ್ಯಾಸವಿರಲಿ ಒಟ್ಟಿನಲ್ಲಿ ಅವರೆಲ್ಲರೂ ಒಂದೇ ಪಂಕ್ತಿಯಲ್ಲಿ ನಿಂತು ನಮಾಝ್ ನಿರ್ವಹಿಸುತ್ತಾರೆ. ಮಾನವ ಸಮೂಹದಲ್ಲಿ ಬಾಹ್ಯ ಭಿನ್ನತೆಗಳಿಂದಾಗಿ ಉದ್ಭವಿಸಿರುವ ಪಕ್ಷಪಾತಗಳೆಲ್ಲವನ್ನೂ ದಿನದ ಐದು ಹೊತ್ತಿನ ಈ ಸಮಾವೇಶ ಮೂಲೋತ್ಪಾಟನೆ ಮಾಡುತ್ತದೆ. ಇದು ಮಾನವೀಯ ಏಕತೆಯನ್ನು ಸೃಷ್ಟಿಸುತ್ತದೆ. ಅಂತರ್ರಾಷ್ಟ್ರೀಯತೆಯ ಬೇರುಗಳನ್ನು ಬಲಪಡಿಸುತ್ತದೆ. ವಂಶ- ಭ್ರಾತೃತ್ವದ ಪೂರ್ವಗ್ರಹಗಳೆಲ್ಲವೂ ಸುಳ್ಳು, ಮಾನವರೆಲ್ಲರೂ ಒಂದೇ ದೇವನ ದಾಸರು, ದೇವನ ದಾಸ್ಯ ಮತ್ತು ಆರಾಧನೆಯಲ್ಲಿ ಅವರೆಲ್ಲರೂ ಒಂದುಗೂಡಿದರೆ ಏಕ ಸಮುದಾಯವಾಗಿ ಮಾರ್ಪಡುತ್ತಾರೆ ಎಂಬ ಭಾವನೆಯನ್ನು ಅದು ಮಾನವನ ಮಸ್ತಿಷ್ಕದಲ್ಲಿ ಲೀನಗೊಳಿಸುತ್ತದೆ.

ಅನಂತರ ಅವರು ಒಂದೇ ಸಾಲಿನಲ್ಲಿ ಭುಜಕ್ಕೆ ಭುಜ ಆನಿಸಿ ನಿಂತುಕೊಳ್ಳುತ್ತಾರೆ. ಒಂದೇ ಬಾರಿ ಶಿರಬಾಗುತ್ತಾರೆ ಮತ್ತು ಸಾಷ್ಟಾಂಗವೆರಗುತ್ತಾರೆ. ಹೀಗೆ ಅವರಲ್ಲಿ ಸುವ್ಯವಸ್ಥಿತ ಮತ್ತು ಸಾಮೂಹಿಕ ಪ್ರಕ್ರಿಯೆಯ ಪ್ರತಿಭೆ ಬೆಳೆಯುತ್ತದೆ. ಇಂತಹ ಪ್ರತಿಭೆಯನ್ನು ಬೆಳೆಸಲಿಕ್ಕಾಗಿಯೇ ಸೇನೆಯಲ್ಲಿ ಕವಾಯಿತುಗಳನ್ನು ನಡೆಸಲಾಗುತ್ತದೆ. ಮುಸ್ಲಿಮರಲ್ಲಿ ಐಕಮತ್ಯ ಮತ್ತು ಸಮಾನ ಪ್ರವೃತ್ತಿಯನ್ನು ಬೆಳೆಸುವುದು ಹಾಗೂ ದೇವನ ದಾಸ್ಯದಲ್ಲಿ ಅವರನ್ನು ಪರಸ್ಪರ ಒಟ್ಟು ಸೇರಿಸಿ ಒಂದೇ ದೇಹದಂತೆ ಮಾಡುವುದೇ ಇದರ ಉದ್ದೇಶ.

## ಸಾಮೂಹಿಕ ಪ್ರಾರ್ಥನೆಗಳು

ನಮಾಝ್‌ನಲ್ಲಿ ದೇವನೊಂದಿಗೆ ಮಾಡಲಾಗುವ ಪ್ರಾರ್ಥನೆ ಪಂಕ್ತಿಬದ್ಧತೆಯ ಈ

ಎಲ್ಲಾ ಪ್ರಯೋಜನಗಳನ್ನು ಇಮ್ಮಡಿಗೊಳಿಸುತ್ತದೆ. ಎಲ್ಲರೂ ಏಕಕಂಠರಾಗಿ ತಮ್ಮ ಪ್ರಭುವಿನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ:

إِيَّاكَ نَعْبُدُ وَإِيَّاكَ نَسْتَعِينُ

"ಇಯ್ಯಾಕ ನಅ್‌ಬುದು ವಇಯ್ಯಾಕ ನಸ್ತಈನ್"

ನಾವೆಲ್ಲರೂ ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಯಾಚಿಸುತ್ತೇವೆ

اهْدِنَا الصِّرَاطَ الْمُسْتَقِيمَ

"ಇಹ್‌ದಿನಸ್ಸಿರಾತಲ್ ಮುಸ್ತಕೀಮ್"

ನಮಗೆಲ್ಲರಿಗೂ ಸನ್ಮಾರ್ಗವನ್ನು ತೋರಿಸು

اَلسَّلَامُ عَلَيْنَا وَعَلَى عِبَادِ اللّٰهِ الصَّالِحِينَ -

"ಅಸ್ಸಲಾಮು ಅಲೈನಾ ವಅಲಾ ಇಬಾದಿಲ್ಲಾಹಿಸ್ಸಾಲಿಹೀನ್"

ನಮ್ಮ ಮೇಲೂ ಅಲ್ಲಾಹನ ಎಲ್ಲ ಸಜ್ಜನ ದಾಸರ ಮೇಲೂ ಶಾಂತಿಯಿರಲಿ.

ನಮಾಝಿನ ಯಾವುದೇ ಪ್ರಾರ್ಥನೆಯಲ್ಲಿ ನಮಗೆ ಏಕವಚನ ಕಂಡುಬರುವುದಿಲ್ಲ. ಎಲ್ಲೆಡೆಯೂ ಬಹುವಚನವನ್ನೇ ಪ್ರಯೋಗಿಸಲಾಗಿದೆ. ಸಾಮೂಹಿಕ ಆರಾಧನೆ ಮತ್ತು ಸಾಮೂಹಿಕ ಪ್ರಕ್ರಿಯೆಯ ಜತೆಗೆ ಈ ಸಾಮೂಹಿಕ ಪ್ರಾರ್ಥನೆಗಳು ವ್ಯಕ್ತಿಯಲ್ಲಿ ತಾನು ಒಬ್ಬಂಟಿಯಲ್ಲ ಎಂಬ ಭಾವನೆಯನ್ನು ನಿರಂತರ ದಿನದಲ್ಲಿ ಐದು ಬಾರಿ ಮುಂದಟ್ಟುಗೊಳಿಸುತ್ತದೆ. ಅವನು ಎಲ್ಲವನ್ನೂ ತನಗಾಗಿ ಬಯಸುವುದಿಲ್ಲ ಮತ್ತು ಪ್ರಾರ್ಥಿಸುವುದಿಲ್ಲ. ಅವನ ಜೀವನ ಸಮೂಹದೊಂದಿಗೆ ದೃಢ ಸಂಬಂಧ ಹೊಂದಿರುತ್ತದೆ. ಸಮೂಹದ ಹಿತದಲ್ಲೇ ಅವನ ಹಿತ ಅಡಕವಾಗಿರುತ್ತದೆ. ಸಮೂಹ ಅನುಸರಿಸುವ ಸನ್ಮಾರ್ಗದಲ್ಲಿ ನಡೆಯುವುದರಲ್ಲೇ ಅವನಿಗೆ ಕ್ಷೇಮವಿರುತ್ತದೆ. ದೇವನ ವತಿಯಿಂದ ಅನುಗ್ರಹ ಮತ್ತು ಶಾಂತಿ ಸಮೂಹದ ಮೇಲೆ ವರ್ಷಿಸುತ್ತದೆ. ಆಗ ಅವನೂ ಅದರಿಂದ ಪುನೀತನಾಗುತ್ತಾನೆ. ಇದು ಮೆದುಳಿನಿಂದ ತನ್ನತನವನ್ನು (Individualism) ದೂರೀಕರಿಸುತ್ತದೆ. ಸಮೂಹ ಪ್ರಜ್ಞೆಯನ್ನು (Social Mindedness) ವ್ಯಕ್ತಿಯಲ್ಲಿ ಬೆಳೆಸುತ್ತದೆ. ಸಮೂಹಕ್ಕೆ ಸೇರಿದ ವ್ಯಕ್ತಿಗಳಲ್ಲಿ ಹಿತಾಕಾಂಕ್ಷೆ ಮತ್ತು ನಿಸ್ಪೃಹ ಪ್ರೇಮ ಸಂಬಂಧವನ್ನು ವೃದ್ಧಿಸುತ್ತದೆ. ದಿನದಲ್ಲಿ ಐದು ಬಾರಿ ಮುಸ್ಲಿಮರ ಸಾಮೂಹಿಕ ಪ್ರಜ್ಞೆಯನ್ನು ಹೀಗೆ ಉದ್ದೀಪಿಸಲಾಗುತ್ತದೆ. ಮಸೀದಿಯ ಹೊರಗಿನ ಜೀವನದ ವಿಶಾಲರಂಗದಲ್ಲಿ, ಅವರ ವ್ಯವಹಾರ ಸರಿಯಾಗಿರಬೇಕೆಂಬುದೇ ಇದರ ಉದ್ದೇಶ.

## ನಾಯಕತ್ವ

ಓರ್ವ ನಾಯಕನ ವಿನಾ ಈ ಸಾಮೂಹಿಕ ಆರಾಧನೆಯನ್ನು ನಿರ್ವಹಿಸಲು ಸಾಧ್ಯವಿಲ್ಲ. ಇಬ್ಬರು ಕಡ್ಡಾಯ ನಮಾಝನ್ನು ನಿರ್ವಹಿಸಲಿಕ್ಕಿದ್ದರೂ ಅವರ ಪೈಕಿ ಓರ್ವ ನಾಯಕ ಮತ್ತು ಇನ್ನೋರ್ವ ಅನುಯಾಯಿಯಾಗಬೇಕಾದುದು ಅನಿವಾರ್ಯ. ಜಮಾಅತ್ ನೆರವೇರುತ್ತಿರುವಾಗ

ಪ್ರತ್ಯೇಕವಾಗಿ ನಮಾಝ್ ನಿರ್ವಹಿಸುವುದು ನಿಷಿದ್ಧ. ಅಂತಹ ನಮಾಝ್ ಸಿಂಧುವೆನಿಸುವುದಿಲ್ಲ. ಹೊಸತಾಗಿ ಬರುವವರೆಲ್ಲರೂ ಆ ಸಾಮೂಹಿಕ ಪ್ರಾರ್ಥನೆಯಲ್ಲಿ ಶಾಮೀಲಾಗಬೇಕು ಎಂದು ಆಜ್ಞಾಪಿಸಲಾಗಿದೆ. ನಾಯಕತ್ವದ ಸ್ಥಾನ ಯಾವುದೇ ವರ್ಗ, ವಂಶ ಅಥವಾ ಸಮೂಹಕ್ಕೆ ಸೀಮಿತವಾಗಿಲ್ಲ. ಅದಕ್ಕೆ ಯಾವುದೇ ಪ್ರತ್ಯೇಕ ಪದವಿ ಅಥವಾ ಸನದಿನ ಅಗತ್ಯವೂ ಇಲ್ಲ. ಯಾವ ಮುಸ್ಲಿಮನೂ ನಾಯಕನೆನಿಸಿಕೊಳ್ಳಬಹುದು. ಆದರೆ ನಾಯಕನನ್ನಾಗಿ ಮಾಡುವಾಗ ಕೆಲವೊಂದು ಗುಣಗಳನ್ನು ಗಮನದಲ್ಲಿರಿಸಬೇಕಾಗಿದೆಯೆಂದು ಶರೀಅತ್‌ನಲ್ಲಿ ವಿಧಿಸಲಾಗಿದೆ. ಆ ಗುಣಗಳ ಪ್ರಸ್ತಾಪ ಮುಂದೆ ಬರುತ್ತದೆ.

ಸಾಮೂಹಿಕ ನಮಾಝ್‌ನಲ್ಲಿ ನಾಯಕ ಮತ್ತು ಅನುಯಾಯಿಗಳ ಸಂಬಂಧವನ್ನು ಯಾವ ಆಧಾರಗಳಲ್ಲಿ ಸ್ಥಾಪಿಸಲಾಗಿದೆಯೋ ಆ ಪೈಕಿ ಒಂದೊಂದು ಅಂಶವೂ ಅರ್ಥಪೂರ್ಣವಾಗಿದೆ. ಅದರಲ್ಲಿ ಪ್ರತಿಯೊಬ್ಬ ಮುಸ್ಲಿಮನಿಗೆ ನಾಯಕತ್ವ ಮತ್ತು ಅನುಸರಣೆಯ ಸಂಪೂರ್ಣ ತರಬೇತಿ ನೀಡಲಾಗುತ್ತದೆ. ಈ ಚಿಕ್ಕ ಮಸೀದಿಯ ಹೊರಗಿನ ವಿಶಾಲ ಮಸೀದಿಯಾದ 'ಭೂಮಿ'ಯಲ್ಲಿ ಮುಸ್ಲಿಮರ ಸಾಮೂಹಿಕ ವ್ಯವಸ್ಥೆ ಹೇಗಿರಬೇಕೆಂದು ಅಲ್ಲಿ ಕಲಿಸಲಾಗುತ್ತದೆ. ಸಮೂಹದಲ್ಲಿ ನಾಯಕನ ಸ್ಥಾನವೇನು, ಅವನ ಕರ್ತವ್ಯಗಳೇನು, ಅವನ ಹಕ್ಕುಗಳೇನು ಮತ್ತು ನಾಯಕನಾಗಿರುವಾಗ ಅವನ ಧೋರಣೆ ಹೇಗಿರಬೇಕೆಂದು ಕಲಿಸಲಾಗುತ್ತದೆ. ಇನ್ನೊಂದೆಡೆ ಸಮೂಹವು ನಾಯಕನನ್ನು ಹೇಗೆ ಅನುಸರಿಸಬೇಕು, ಯಾವ ವಿಷಯಗಳಲ್ಲಿ ಅನುಸರಿಸಬೇಕು, ಅವನು ತಪ್ಪೆಸಗಿದರೆ ಮುಸ್ಲಿಮರು ಏನು ಮಾಡಬೇಕು, ಎಷ್ಟರ ತನಕ ತಪ್ಪೆಸಗಿದಾಗ ಅವನನ್ನು ಪಾಲಿಸಬಹುದು ಮತ್ತು ಯಾವ ಹಂತದಲ್ಲಿ ಅವನನ್ನು ತಡೆಯುವ ಹಕ್ಕಿದೆ, ಯಾವ ಸಂದರ್ಭದಲ್ಲಿ ಸುಧಾರಣೆ ಮಾಡಿಕೊಳ್ಳುವಂತೆ ಅವನನ್ನು ಕೋರಿಕೊಳ್ಳಬಹುದು, ಯಾವ ಸಂದರ್ಭದಲ್ಲಿ ನಾಯಕನನ್ನು ಪದಚ್ಯುತ ಗೊಳಿಸಬಹುದು ಎಂಬುದನ್ನೂ ಕಲಿಸಲಾಗುತ್ತದೆ. ಒಟ್ಟಿನಲ್ಲಿ ಇದು ಒಂದು ದೊಡ್ಡ ಸಾಮ್ರಾಜ್ಯವನ್ನು ನಡೆಸಲು ನೀಡಲಾಗುವ ಸಣ್ಣ ಪ್ರಮಾಣದ ತರಬೇತಿಯಾಗಿದೆ. ದಿನದಲ್ಲಿ ಐದು ಹೊತ್ತು ಸಣ್ಣ ಸಣ್ಣ ಮಸೀದಿಗಳಲ್ಲಿ ಈ ಬಗೆಯ ತರಬೇತಿಯನ್ನು ನೀಡಲಾಗುತ್ತದೆ.

ಹಾಗೆಯೇ ಎಂತಹ ವ್ಯಕ್ತಿಯನ್ನು ನಾಯಕನನ್ನಾಗಿ ಆರಿಸಬೇಕೆಂದೂ ನಿರ್ದೇಶಿಸಲಾಗಿದೆ. ಅವನು ದೇವನಿಷ್ಠೆ, ಸಚ್ಚಾರಿತ್ರ್ಯ ಮತ್ತು ಧರ್ಮಜ್ಞಾನವಿರುವ ಪ್ರೌಢ ವ್ಯಕ್ತಿಯಾಗಿರಬೇಕು. ಈ ಪೈಕಿ ಯಾವ ಗುಣಕ್ಕೆ ಇನ್ನೊಂದು ಗುಣಕ್ಕಿಂತ ಪ್ರಾಶಸ್ತ್ಯ ಕೊಡಬೇಕೆಂದು ಪ್ರವಾದಿ ವಚನದಲ್ಲಿ ಅನುಕ್ರಮವಾಗಿ ತಿಳಿಸಲಾಗಿದೆ. ಈ ಮೂಲಕ ಸಮುದಾಯದ ನಾಯಕನನ್ನು ಆರಿಸುವಾಗ ಯಾವ ಅಂಶಗಳನ್ನು ಗಮನದಲ್ಲಿರಿಸಬೇಕೆಂದು ಬೋಧಿಸಲಾಗಿದೆ.

ಸಮೂಹದ ಪೈಕಿ ಹೆಚ್ಚಿನವರಿಗೆ ಅಸಮಾಧಾನವಿರುವ ವ್ಯಕ್ತಿಯನ್ನು ನಾಯಕನನ್ನಾಗಿ ಮಾಡಬಾರದು ಎಂದು ಆದೇಶಿಸಲಾಗಿದೆ. ಅಲ್ಪಸ್ವಲ್ಪ ಭಿನ್ನಾಭಿಪ್ರಾಯ ಇಲ್ಲದವರು ಯಾರಿದ್ದಾರೆ? ಆದರೆ ಸಮೂಹದ ಹೆಚ್ಚಿನ ವ್ಯಕ್ತಿಗಳು ನಿರ್ದಿಷ್ಟ ವ್ಯಕ್ತಿಯನ್ನು ಅನುಸರಿಸಿ ನಮಾಝ್ ನಿರ್ವಹಿಸಲು ಇಷ್ಟಪಡದಿದ್ದರೆ ಅವನಿಗೆ ನಮಾಝಿನ ನಾಯಕತ್ವ ನೀಡಬಾರದು.

ಇಲ್ಲಿಯೂ ಸಾಮುದಾಯಿಕ ನಾಯಕನ ಆಯ್ಕೆಗೆ ಇರುವ ಸೂತ್ರವೊಂದನ್ನು ತಿಳಿಸಲಾಗಿದೆ. ದುಷ್ಕೃತ್ಯ ಮತ್ತು ಚಾರಿತ್ರ್ಯ ಹೀನತೆಯಿಂದಾಗಿ ಜನರು ದ್ವೇಷಿಸುವಂತಹ ಕುಖ್ಯಾತ ವ್ಯಕ್ತಿ ಮುಸ್ಲಿಮರ ನಾಯಕತ್ವಕ್ಕೆ ಅರ್ಹನಲ್ಲ.

ನಮಾಝ್‌ನ ನಾಯಕತ್ವ ವಹಿಸುವವರು ಸಮೂಹದ ಅತ್ಯಂತ ದುರ್ಬಲ ವ್ಯಕ್ತಿಯನ್ನೂ ಗಮನದಲ್ಲಿರಸಬೇಕು ಎಂಬ ಆದೇಶವಿದೆ. ಕೇವಲ ಯುವಕರು, ದೃಢಕಾಯರು, ಆರೋಗ್ಯವಂತರು ಮತ್ತು ಪುರುಸೊತ್ತಿನಲ್ಲಿರುವವರನ್ನು ಗಮನದಲ್ಲಿರಿಸಿ ಉದ್ದನೆಯ ಕುರ್‌ಆನ್ ವಾಚನ ಮಾಡಬಾರದು. ಸುದೀರ್ಘ ರುಕೂಅ್- ಸುಜೂದ್‌ಗಳನ್ನು ಮಾಡಬಾರದು. ಸಮೂಹದಲ್ಲಿ ವಯೋವೃದ್ಧರು, ರೋಗಿಗಳು, ದುರ್ಬಲರು, ತಮ್ಮ ಕೆಲಸವನ್ನು ತೊರೆದು ನಮಾಝಿಗೆ ಬಂದಿದ್ದು ಪುನಃ ಕೆಲಸದಲ್ಲಿ ತೊಡಗಬೇಕಾಗಿರುವಂತಹ ನಿಬಿಡ ವ್ಯಕ್ತಿಗಳು ಮುಂತಾದವರಿದ್ದಾರೆ. ಪ್ರವಾದಿವರ್ಯರು(ಸ) ಈ ನಿಟ್ಟಿನಲ್ಲಿ ಕರುಣೆ ಮತ್ತು ವಾತ್ಸಲ್ಯದ ಯಾವ ಮಾದರಿಯನ್ನು ತೋರಿದ್ದಾರೆಂದರೆ, ನಮಾಝಿನ ವೇಳೆ ಮಗು ಅಳುವ ಸ್ವರ ಕೇಳಿದರೂ ಅವರು ನಮಾಝನ್ನು ಸಂಕ್ಷಿಪ್ತಗೊಳಿಸುತ್ತಿದ್ದರು. ನಮಾಝಿನಲ್ಲಿ ಶಾಮೀಲುಗೊಂಡಿರಬಹುದಾದ ಮಗುವಿನ ತಾಯಿಗೆ ಸಂಕಟವಾಗಬಾರದು ಎಂಬುದೇ ಇದರ ಉದ್ದೇಶ. ಈ ಮೂಲಕ ಸಮುದಾಯದ ನಾಯಕತ್ವ ನೀಡಲಾದರೆ ನಾಯಕನು ಸಮೂಹದೊಂದಿಗೆ ಹೇಗೆ ವ್ಯವಹರಿಸಬೇಕು ಎಂದು ಅವನಿಗೆ ಬೋಧಿಸಲಾಗಿದೆ.

ನಮಾಝ್‌ನ ನೇತೃತ್ವ ವಹಿಸುತ್ತಿರುವ ವೇಳೆ ನಾಯಕನಿಗೆ ಯಾವುದಾದರೂ ಅಘಾತ ಸಂಭವಿಸಿ ಅದರಿಂದಾಗಿ ಅವನಿಗೆ ನಮಾಝ್ ನಿರ್ವಹಿಸುವುದು ದುಃಸಾಧ್ಯವಾದರೆ ಅವನು ತಟ್ಟನೆ ಹಿಂದೆ ಸರಿಯಬೇಕು ಮತ್ತು ತನ್ನ ಜಾಗದಲ್ಲಿ ಹಿಂದೆ ನಿಂತಿರುವವರ ಪೈಕಿ ಒಬ್ಬನನ್ನು ನಿಲ್ಲಿಸಬೇಕೆಂದು ಆದೇಶಿಸಲಾಗಿದೆ. ಇಲ್ಲಿ ಮತ್ತೆ ಸಾಮುದಾಯಿಕ ನಾಯಕನಿಗೊಂದು ಆದೇಶವಿದೆ. ಅವನು ಸ್ವತಃ ತಾನು ನಾಯಕತ್ವವನ್ನು ವಹಿಸುವ ಸ್ಥಿತಿಯಲ್ಲಿಲ್ಲ ಎಂದು ಕಂಡುಕೊಂಡಾಗ ಮತ್ತೊಬ್ಬ ಅರ್ಹ ವ್ಯಕ್ತಿಗೆ ಸ್ಥಾನ ಬಿಟ್ಟುಕೊಡಬೇಕು ಅದರಲ್ಲಿ ಸಂಕೋಚವಾಗಲಿ ಸ್ವಾರ್ಥವಾಗಲಿ ಇರಕೂಡದು. ಇದು ಅವನ ಕರ್ತವ್ಯ.

ಹಾಗೆಯೇ ನಮಾಝಿನಲ್ಲಿ ನಾಯಕನ ಕ್ರಿಯೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬ ಆದೇಶವಿದೆ. ಅವನ ಚಲನೆಗಿಂತ ಮೊದಲು ಸ್ವತಃ ಯಾವುದೇ ಕ್ರಿಯೆ ನಡೆಸುವುದು ನಿಷಿದ್ಧವಾಗಿದೆ. ನಮಾಝಿನಲ್ಲಿ ನಾಯಕನಿಗಿಂತ ಮೊದಲು ಶಿರಬಾಗುವವರು ಮತ್ತು ಸಾಷ್ಟಾಂಗವೆರಗುವವರು ಪರಲೋಕದಲ್ಲಿ ಕತ್ತೆಯ ಸ್ವರೂಪದಲ್ಲಿ ಎಬ್ಬಿಸಲ್ಪಡುವರು ಎಂದು ಪ್ರವಾದಿವಚನದಲ್ಲಿ ಹೇಳಲಾಗಿದೆ. ಈ ಮೂಲಕ ನಾಯಕನನ್ನು ಎಷ್ಟು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬ ಉಪದೇಶವನ್ನು ಸಮುದಾಯಕ್ಕೆ ನೀಡಲಾಗಿದೆ.

ನಮಾಝಿನಲ್ಲಿ ನಾಯಕ ತಪ್ಪೆಸಗಿದರೆ, ಅರ್ಥಾತ್ ಕುಳಿತುಕೊಳ್ಳಬೇಕಾದಲ್ಲಿ ನಿಂತುಕೊಂಡರೆ ಮತ್ತು ನಿಲ್ಲಬೇಕಾದಲ್ಲಿ ಕುಳಿತುಕೊಂಡರೆ سُبْحَانَ اللهِ 'ಸುಬ್ಹಾನಲ್ಲಾಹ್' ಎಂದು ಹೇಳಿ ಅವನ ತಪ್ಪಿನ ಬಗ್ಗೆ ಎಚ್ಚರಿಕೆ ನೀಡಿ ಎಂಬ ಆದೇಶವಿದೆ. سُبْحَانَ اللهِ 'ಸುಬ್ಹಾನಲ್ಲಾಹ್' ಎಂದರೆ ಅಲ್ಲಾಹನು ಪರಮಪಾವನನು ಎಂದರ್ಥ. ನಾಯಕನ ತಪ್ಪಿಗೆ

سُبْحَانَ اللّٰه 'ಸುಬ್ಹಾನಲ್ಲಾಹ್' ಎಂದು ಹೇಳುವುದು ಅಲ್ಲಾಹನು ಮಾತ್ರವೇ ದೋಷಮುಕ್ತ. ನೀವಾದರೋ ಓರ್ವ ಮನುಷ್ಯ. ಆದ್ದರಿಂದ ನಿಮ್ಮಿಂದ ಯಾವುದೇ ಮರೆವು ಸಂಭವಿಸುವುದರಲ್ಲಿ ಆಶ್ಚರ್ಯವಿಲ್ಲ ಎಂಬುದರ ಪ್ರಕಟನೆಯಾಗಿದೆ. ಇದು ನಾಯಕನನ್ನು ಎಚ್ಚರಿಸುವ ರೀತಿಯಾಗಿದೆ.

ಹೀಗೆ ನಾಯಕನನ್ನು ಎಚ್ಚರಿಸಲಾದಾಗ ಅವನು ಯಾವುದೇ ಸಂಕೋಚವಿಲ್ಲದೆ ತನ್ನ ತಪ್ಪನ್ನು ತಿದ್ದಿಕೊಳ್ಳಬೇಕು. ಮಾತ್ರವಲ್ಲ ನಮಾಝಿನ ಸಮಾಪ್ತಿಗೆ ಮೊದಲು ಅಲ್ಲಾಹನ ಮುಂದೆ ತನ್ನ ತಪ್ಪನ್ನು ಸಮ್ಮತಿಸುತ್ತಾ ಎರಡು ಬಾರಿ ಸಾಷ್ಟಾಂಗವೆರಗಬೇಕು. ಆದರೆ ಹೀಗೆ ಎಚ್ಚರಿಕೆ ನೀಡಿರುವುದರ ಹೊರತಾಗಿಯೂ ನಿಂತುಕೊಂಡ ಅಥವಾ ಕುಳಿತುಕೊಂಡ ಬಗ್ಗೆ ನಾಯಕನಿಗೆ ಪೂರ್ಣಭರವಸೆಯಿದ್ದರೆ ಅವನು ತನ್ನ ಭರವಸೆಯ ಆಧಾರದಲ್ಲಿ ವರ್ತಿಸಬಹುದಾಗಿದೆ. ಅಂತಹ ಸಂದರ್ಭದಲ್ಲಿ ಒಂದು ವೇಳೆ ನಾಯಕನು ತಪ್ಪೆಸಗುತ್ತಿದ್ದಾನೆ ಎಂದು ಅವನಿಗೆ ಖಚಿತವಾಗಿ ತಿಳಿದಿದ್ದರೂ ಸಾಮೂಹಿಕ ನಮಾಝಿನಲ್ಲಿ ಸೇರಿರುವವರು ನಾಯಕನೊಂದಿಗೆ ಪೂರ್ಣ ರೀತಿಯಲ್ಲಿ ಸಹಕರಿಸಬೇಕಾಗಿದೆ. ನಮಾಝ್ ಮುಗಿದ ನಂತರ ಹಿಂಬಾಲಕರಿಗೆ ನಾಯಕನಿಗೆ ಅವನ ತಪ್ಪನ್ನು ಖಾತ್ರಿ ಪಡಿಸಿ ನಮಾಝನ್ನು ಪುನರಾವರ್ತಿಸುವಂತೆ ಕೇಳಿಕೊಳ್ಳುವ ಹಕ್ಕಿದೆ.

ಇದು ನಾಯಕನು ಆಂಶಿಕ ತಪ್ಪುಗಳನ್ನು ಮಾಡಿದಾಗ ಸಮೂಹ ಅವನೊಂದಿಗೆ ವ್ಯವಹರಿಸಬೇಕಾದ ರೀತಿಯಾಗಿದೆ. ಆದರೆ ನಾಯಕ ಪ್ರವಾದಿಚರ್ಯೆಗೆ ವಿರುದ್ಧವಾಗಿ ನಮಾಝಿನ ಕ್ರಮವನ್ನೇ ಬದಲಿಸಿ ಬಿಟ್ಟರೆ, ಅಥವಾ ಕುರ್‌ಆನನ್ನು ತಪ್ಪು ತಪ್ಪಾಗಿ ಓದಿದರೆ, ನಮಾಝ್ ನಿರ್ವಹಣೆಯ ವೇಳೆ ಸತ್ಯ ನಿಷೇಧ, ಬಹುದೇವಾರಾಧನೆ ಅಥವಾ ಸುವ್ಯಕ್ತವಾದ ತಪ್ಪುಗಳನ್ನೆಸಗಿದರೆ, ಇಲ್ಲವೇ ದಿವ್ಯ ಕಾನೂನಿನ ಪಾಲನೆಯಿಂದ ದೂರಸರಿಯುವುದಕ್ಕೆ ಸಮಾನವಾದ ಯಾವುದೇ ಕರ್ಮವೆಸಗಿದರೆ, ಅಥವಾ ಅವನಿಗೆ ಬುದ್ಧಿಭ್ರಮಣೆಯಾಗಿದ್ದರೆ, ಸಮೂಹದ ಪಾಲಿಗೆ ನಮಾಝನ್ನು ತೊರೆದು ಅವನಿಂದ ದೂರಸರಿಯುವುದು ಮತ್ತು ಅವನ ಸ್ಥಾನದಲ್ಲಿ ಬೇರೊಬ್ಬನನ್ನು ನೆಲೆಗೊಳಿಸುವುದು ಕಡ್ಡಾಯವಾಗಿದೆ. ಪೂರ್ವೋಕ್ತ ಸಂದರ್ಭದಲ್ಲಿ ನಾಯಕನ ಪಾಲನೆ ಮಾಡದಿರುವುದು ಮಹಾ ಪಾಪವಾಗಿದ್ದರೆ, ಎರಡನೇ ಪರಿಸ್ಥಿತಿಯಲ್ಲಿ ನಾಯಕನ ಪಾಲನೆ ಮಾಡುವುದು ಮಹಾಪಾಪವಾಗಿದೆ.

ಸಮುದಾಯ ಮತ್ತು ಅದರ ನಾಯಕನ ಮಟ್ಟಿಗೂ ಈ ನಿಯಮ ಅನ್ವಯವಾಗುತ್ತದೆ. ನಾಯಕ ಎಲ್ಲಿಯ ತನಕ ಇಸ್ಲಾಮೀ ಜೀವನ ಸಂಹಿತೆಯ ಪರಿಧಿಯೊಳಗಿರುತ್ತಾನೋ ಅಲ್ಲಿಯವರೆಗೆ ಅವನ ಅನುಸರಣೆ ಮುಸ್ಲಿಮರ ಪಾಲಿಗೆ ಕಡ್ಡಾಯವಾಗಿದೆ. ಈ ಪರಿಸ್ಥಿತಿಯಲ್ಲಿ ನಾಯಕನ ಉಲ್ಲಂಘನೆ ಪಾಪವಾಗಿದೆ. ಹೆಚ್ಚೆಂದರೆ ತಪ್ಪೆಸಗಿದಾಗ ಅವನನ್ನು ಎಚ್ಚರಿಸಬಹುದಾಗಿದೆ. ಆದರೆ ಎಚ್ಚರಿಸುವುದರ ಹೊರತಾಗಿಯೂ ಅವನು ಆಂಶಿಕ ತಪ್ಪುಗಳನ್ನು ಮುಂದುವರಿಸುತ್ತಲಿದ್ದರೆ ಅವನ ಅನುಸರಣೆಗೆ ಬದ್ಧರಾಗಿರಬೇಕು. ಆದರೆ ಅವನು ಇಸ್ಲಾಮೀ ಜೀವನ ಸಂಹಿತೆಯ ಮೇರೆಗಳನ್ನು ಮೀರಿದರೆ ಅನಂತರ ಅವನು ಮುಸ್ಲಿಮರ ಸಮೂಹದ ನಾಯಕನಾಗಿರಲು

ಸಾಧ್ಯವಿಲ್ಲ.

ನಮಾಝ್‌ನ ಉದ್ದೇಶ ಮತ್ತು ಅದರ ಪರಿಣಾಮಗಳ ಬಗ್ಗೆ ಈ ತನಕ ನೀಡಲಾಗಿರುವ ವಿವರಣೆ ಅದರ ಸಕಲ ಅಂಶಗಳನ್ನೂ ಒಳಗೊಂಡಿಲ್ಲ. ಆದರೂ ನಮಾಝನ್ನು ಇಸ್ಲಾಮಿನ ಪ್ರಧಾನ ಸ್ತಂಭವೆಂದು ಹೇಳಲಾಗಿರುವುದರ ಉದ್ದೇಶವೇನೆಂದು ಚೆನ್ನಾಗಿ ಮನಗಾಣಲು ಇದು ಪರ್ಯಾಪ್ತವಿದೆ. ಸ್ತಂಭವೆಂದರೆ ಕಟ್ಟಡ ನೆಲೆನಿಲ್ಲಲು ಆಸರೆಯಾಗಿ ನಿಂತಿರುವ ಕಂಬವಾಗಿದೆ. ಇಸ್ಲಾಮೀ ಜೀವನದ ಕಟ್ಟಡವನ್ನು ನೆಲೆನಿಲ್ಲಿಸಲು ಮತ್ತು ಅದು ಸ್ಥಿರವಾಗಿರಲು ಬೇಕಾಗಿರುವಂತಹ ಆಧಾರಗಳಾವುವು? ಮೊದಲನೆಯದಾಗಿ ಮುಸ್ಲಿಮರಲ್ಲಿ ವೈಯಕ್ತಿಕವಾಗಿ ಮತ್ತು ಅವರ ಸಮೂಹದಲ್ಲಿ ಸಾಮಾನ್ಯವಾಗಿ ದೇವನ ದಾಸ್ಯದ ಕರ್ತವ್ಯಗಳನ್ನು ಪಾಲಿಸಲು ಮತ್ತು ಲೋಕದಲ್ಲಿ 'ಖಿಲಾಫತ್'ನ ಹೊಣೆಯನ್ನು ಹೊರಲು ಬೇಕಾಗಿರುವಂತಹ ಗುಣಗಳು ಬೆಳೆಯಬೇಕು. ಅವರು ಪರೋಕ್ಷದ ಮೇಲೆ ನೈಜ ಮತ್ತು ಆಳವಾದ ವಿಶ್ವಾಸ ಉಳ್ಳವರಾಗಿರಬೇಕು. ಅವರು ಅಲ್ಲಾಹನನ್ನು ತಮ್ಮ ಏಕೈಕ ಆಜ್ಞಾಧಿಕಾರಿಯೆಂದು ಸಮ್ಮತಿಸುವವರಾಗಿರಬೇಕು. ಅವನ ಕರ್ತವ್ಯನಿಷ್ಠ ಮತ್ತು ಅನುಸರಣಶೀಲ ದಾಸರಾಗಿರಬೇಕು. ಇಸ್ಲಾಮಿನ ವೈಚಾರಿಕ ವ್ಯವಸ್ಥೆ ಮತ್ತು ಜೀವನ ಸಿದ್ಧಾಂತ ಅವರ ನರನಾಡಿಗಳಲ್ಲಿ ಹರಿಯುತ್ತಿರಬೇಕು ಮತ್ತು ಅದರ ಆಧಾರದಲ್ಲಿ ಅವರಲ್ಲಿ ಸುದೃಢವಾದ ಚಾರಿತ್ರ್ಯ ನಿರ್ಮಾಣವಾಗಬೇಕು. ಅವರ ಚಾರಿತ್ರ್ಯ ಇದೇ ಚೌಕಟ್ಟಿಗೆ ಬದ್ಧವಾಗಿರಬೇಕು. ತಮ್ಮ ವಿಶ್ವಾಸ ಮತ್ತು ನಂಬಿಕೆಗೆ ಅನುಸಾರವಾಗಿ ದೈಹಿಕ ಮತ್ತು ಮಾನಸಿಕ ಶಕ್ತಿಗಳಿಂದ ಪ್ರಯೋಜನ ಪಡೆಯುವಷ್ಟು ಆತ್ಮ ನಿಯಂತ್ರಣವನ್ನು ಅವರು ಹೊಂದಿರಬೇಕು. ಅವರ ಸಮೂಹದಲ್ಲಿ ಕಪಟವಿಶ್ವಾಸಿಗಳು ಹುಟ್ಟಿಕೊಂಡಿದ್ದರೆ ಅಥವಾ ಹೊರಗಿನಿಂದ ಬಂದು ಸೇರಿದ್ದರೆ ಅವರು ಆ ಕೂಟದಿಂದ ಪ್ರತ್ಯೇಕಗೊಳ್ಳಬೇಕು. ಅವರ ಸಾಮೂಹಿಕ ವ್ಯವಸ್ಥೆ ಇಸ್ಲಾಮಿನ ಸಾಮೂಹಿಕ ನಿಯಮಗಳಿಗೆ ಬದ್ಧವಾಗಿರಬೇಕು ಮತ್ತು ಅವರು ಯಂತ್ರೋಪಾಧಿಯಲ್ಲಿ ನಿರಂತರ ಕಾರ್ಯೋನ್ಮುಖರಾಗಿರಬೇಕು. ಅವರಲ್ಲಿ ಸಮೂಹ ಪ್ರಜ್ಞೆ ಜಾಗೃತವಾಗಿರಬೇಕು. ಅವರ ನಡುವೆ ಪರಸ್ಪರ ಪ್ರೇಮ, ಅನುಕಂಪ, ಸಹಕಾರ, ಸಮಾನತೆ ಇತ್ಯಾದಿಗಳಿರಬೇಕು. ಏಕ ರೀತಿಯ ಸ್ಫೂರ್ತಿ ಮತ್ತು ಕರ್ಮವನ್ನು ಅವರು ಹೊಂದಿರಬೇಕು. ನಾಯಕತ್ವ ಮತ್ತು ಅನುಸರಣೆಯ ಮಿತಿಗಳನ್ನು ಅವರು ಬಲ್ಲವರಾಗಿರಬೇಕು. ಶಿಸ್ತುಬದ್ಧವಾಗಿ ಕೆಲಸ ಮಾಡುವಂತಹ ಸಾಮರ್ಥ್ಯ ಅವರಲ್ಲಿರಬೇಕು.

ಈ ಎಲ್ಲಾ ಗುಣಗಳು ನಮಾಝ್‌ನ ಸಂಸ್ಥಾಪನೆಯ ಮೂಲಕ ಬೆಳೆಯುವುದರಿಂದ ಅದನ್ನು ಇಸ್ಲಾಮ್ ಧರ್ಮದ ಸ್ತಂಭವೆಂದು ಕರೆಯಲಾಗಿದೆ. ಈ ಸ್ತಂಭ ಮುರಿದು ಬಿದ್ದರೆ ಮುಸ್ಲಿಮರ ವೈಯಕ್ತಿಕ ಚಾರಿತ್ರ್ಯ ಮತ್ತು ಸಾಮೂಹಿಕ ಚೌಕಟ್ಟುಗಳೆರಡೂ ವಿರೂಪಗೊಳ್ಳುತ್ತವೆ. ಅನಂತರ ಯಾವ ಉದ್ದೇಶಕ್ಕಾಗಿ ಇಸ್ಲಾಮೀ ಸಮೂಹ ಅಸ್ತಿತ್ವದಲ್ಲಿದೆಯೋ ಆ ಉದ್ದೇಶಕ್ಕಾಗಿ ಕಾರ್ಯವೆಸಗುವ ಅರ್ಹತೆಯನ್ನೇ ಅವರು ಕಳೆದುಕೊಳ್ಳುತ್ತಾರೆ. ಆದ್ದರಿಂದಲೇ ನಮಾಝನ್ನು ಇಸ್ಲಾಮಿನ ಸ್ತಂಭವೆನ್ನಲಾಗಿದೆ. ಅರ್ಥಾತ್ ಅದು ಧರ್ಮದ ಆಸರೆಯಾಗಿದೆ. ಅದನ್ನು ಕೆಡವಿದವರು ಧರ್ಮವನ್ನೇ ಕೆಡವಿದರು ಎಂದರ್ಥ.

---

# ಉಪವಾಸ

ಈ ಉದ್ದೇಶಗಳು ಇಸ್ಲಾಮಿನ ದೃಷ್ಟಿಯಲ್ಲಿ ಎಷ್ಟು ಮಹತ್ವಪೂರ್ಣವಾದುದೆಂದರೆ ಅದನ್ನು ಗಳಿಸಲು ಕೇವಲ ನಮಾಝ್ ಪರ್ಯಾಪ್ತವಿದೆ ಎಂದು ಭಾವಿಸಲಾಗಿಲ್ಲ. ಬದಲಾಗಿ ಅದನ್ನು ಬಲಪಡಿಸಲು ಎರಡನೇ ಸ್ತಂಭವಾದ ಉಪವಾಸವನ್ನೂ ಸೇರಿಸಲಾಗಿದೆ. ನಮಾಝಿನಂತೆಯೇ ಉಪವಾಸವೂ ಪುರಾತನ ಕಾಲದಿಂದ ಇಸ್ಲಾಮಿನ ಸ್ತಂಭವಾಗಿದೆ. ಸವಿವರವಾದ ಆದೇಶಗಳಿಗೆ ಸಂಬಂಧಪಟ್ಟಂತೆ ಉಪವಾಸದ ಸ್ವರೂಪ ಭಿನ್ನವಾಗಿದ್ದಿರಬಹುದು- ಆದರೆ ಉಪವಾಸದಲ್ಲಡಕವಾಗಿರುವ ಸ್ಫೂರ್ತಿ ಸದಾ ದೈವಿಕ ನಿಯಮಗಳ ಅವಿಭಾಜ್ಯ ಅಂಗವಾಗಿತ್ತು. ಎಲ್ಲಾ ಪ್ರವಾದಿಗಳ ಕಾಲದಲ್ಲಿ ಇದನ್ನು ಕಡ್ಡಾಯಗೊಳಿಸಲಾಗಿತ್ತು. ಅದನ್ನೇ ಕುರ್‌ಆನ್‌ನಲ್ಲಿ ಹೀಗೆ ವಿವರಿಸಲಾಗಿದೆ-

كُتِبَ عَلَيْكُمُ الصِّيَامُ كَمَا كُتِبَ عَلَى الَّذِينَ مِن قَبْلِكُمْ

"ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದಂತೆಯೇ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ" (2:183)

ಇಸ್ಲಾಮಿನ ಸ್ವಭಾವಕ್ಕೂ ತರಬೇತಿಯ ಈ ವಿಧಾನಕ್ಕೂ ಖಂಡಿತ ಸಂಬಂಧವಿದೆ ಎಂಬ ಅಂಶ ಇದರಿಂದ ಸ್ವಯಂ ವ್ಯಕ್ತವಾಗುತ್ತದೆ.

ಝಕಾತ್ ಮತ್ತು ಹಜ್ಜ್‌ನಂತೆ, ಉಪವಾಸವು ಸ್ಥಿರ ಮತ್ತು ವಿಶಿಷ್ಟ ಸ್ವರೂಪವನ್ನು ಹೊಂದಿರುವಂತಹ ಸ್ತಂಭವಲ್ಲ. ಅದರ ಸ್ವಭಾವ ಹೆಚ್ಚು-ಕಡಿಮೆ ಮೊದಲ ಸ್ತಂಭವಾದ ನಮಾಝಿಗೆ ಹತ್ತಿರವಾಗಿದೆ. ನಮಾಝ್ ಎಂಬ ಸ್ತಂಭಕ್ಕೆ ಸಹಾಯಕವಾಗಿ ಉಪವಾಸದ ಸ್ತಂಭವನ್ನು ಸೇರಿಸಲಾಗಿದೆ. ಅದರ ಕೆಲಸ, ನಮಾಝ್‌ನಿಂದ ವ್ಯಕ್ತಿಯ ಜೀವನದಲ್ಲಿ ಗೋಚರವಾಗುವ ಪರಿಣಾಮಗಳನ್ನು ಇನ್ನಷ್ಟು ತೀವ್ರ ಮತ್ತು ಸುಭದ್ರ ಗೊಳಿಸುವುದಾಗಿದೆ. ನಮಾಝ್, ದಿನದಲ್ಲಿ ಐದು ಬಾರಿ ವ್ಯಕ್ತಿಯ ಮೇಲೆ ಸ್ವಲ್ಪ ಸ್ವಲ್ಪವಾಗಿ ಪರಿಣಾಮಬೀರುವ ಸಾಮಾನ್ಯ ತರಬೇತಿ ವ್ಯವಸ್ಥೆಯಾಗಿದೆ. ಶಿಕ್ಷಣ ಮತ್ತು ತರಬೇತಿಯ ಲಘು ಉಪಹಾರವನ್ನು ಅದರ ಮೂಲಕ ವ್ಯಕ್ತಿಗೆ ನೀಡಲಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಉಪವಾಸ ವರ್ಷಂಪ್ರತಿ ಒಂದು ತಿಂಗಳ ಅವಧಿಗೆ ನೀಡಲಾಗುವ ವಿಶೇಷ ತರಬೇತಿಯಾಗಿದೆ. ಅದು ವ್ಯಕ್ತಿಯನ್ನು ಸುಮಾರು 720 ಗಂಟೆಗಳ ಕಾಲ ನಿರಂತರ ತನ್ನ ಪ್ರಬಲ ಶಿಸ್ತಿನ ಬಾಹುಗಳಲ್ಲಿ ಬಂಧಿಸುತ್ತದೆ. ಆ ಮೂಲಕ ದೈನಂದಿನ ಸಾಮಾನ್ಯ ತರಬೇತಿಯಿಂದ ಉಂಟಾಗಿರುವ ಯಾವುದೇ ಪರಿಣಾಮ ಲಘುವಾಗಿದ್ದರೆ ಅದನ್ನು ಪ್ರಬಲಗೊಳಿಸಲಾಗುತ್ತದೆ. ಈ ಅಸಾಮಾನ್ಯ ತರಬೇತಿ ವ್ಯವಸ್ಥೆ ಹೇಗೆ ಪ್ರವರ್ತಿಸುತ್ತದೆ, ಯಾವ ರೀತಿ ಮಾನವ ಮನಸ್ಸಿನ ಮೇಲೆ ಅಪೇಕ್ಷಣೀಯ ಪರಿಣಾಮವನ್ನು ಬೀರುತ್ತದೆ ಎಂಬುದರ ಸವಿವರ ಸಮೀಕ್ಷೆಯನ್ನು ನಾವು ಈ ಪುಟಗಳಲ್ಲಿ ಮಾಡಬಯಸುತ್ತೇವೆ.

## ಉಪವಾಸದ ಪರಿಣಾಮಗಳು

ರಾತ್ರಿಯ ಅಂತಿಮ ಯಾಮದ ನಂತರ ಸೂರ್ಯೋದಯದ ಮೊದಲ ಲಕ್ಷಣಗಳು

ಗೋಚರವಾಗುತ್ತಲೇ ವ್ಯಕ್ತಿಯ ಪಾಲಿಗೆ ಅನ್ನ-ಪಾನೀಯ ಮತ್ತು ಲೈಂಗಿಕ ಸಂಪರ್ಕ ನಿಷಿದ್ಧವಾಗುತ್ತವೆ. ಅನಂತರ ಸೂರ್ಯೋದಯದ ತನಕ ದಿನವಿಡೀ ಈ ನಿಷೇಧ ಬಾಕಿಯಿರುತ್ತದೆ. ಇದು ಉಪವಾಸದ ನಿಯಮ. ಈ ಮಧ್ಯೆ ಉದ್ದೇಶಪೂರ್ವಕ ನೀರಿನ ಒಂದು ಗುಟುಕು ಅಥವಾ ಆಹಾರದ ಒಂದು ತುಣುಕನ್ನೂ ಗಂಟಲೊಳಗಿಳಿಸುವ ಅನುಮತಿ ಸರ್ವಥಾ ಇಲ್ಲ. ದಂಪತಿಗಳು ಪರಸ್ಪರ ಲೈಂಗಿಕ ತೃಷೆಯನ್ನು ಈಡೇರಿಸುವುದೂ ನಿಷಿದ್ಧ. ಅನಂತರ ಮುಸ್ಸಂಜೆಯ ನಿರ್ದಿಷ್ಟ ಅವಧಿ ಆಸನ್ನವಾಗುತ್ತಲೇ ಈ ನಿಷೇಧ ಕೊನೆಗೊಳ್ಳುತ್ತದೆ. ಅನಂತರ ನಿಮಿಷಕ್ಕೆ ಮೊದಲು ನಿಷಿದ್ಧವಾಗಿದ್ದವುಗಳೆಲ್ಲವೂ ಕ್ಷಣಾರ್ಧದಲ್ಲಿ ಸಮ್ಮತವಾಗಿ ಬಿಡುತ್ತದೆ. ರಾತ್ರಿ ಪೂರ್ತಿ ಈ ಸಮ್ಮತಿ ಮುಂದುವರಿಯುತ್ತದೆ. ಅನಂತರ ಮರುದಿನದ ನಿರ್ದಿಷ್ಟ ಘಳಿಗೆ ಆಸನ್ನವಾಗುತ್ತಲೇ ಪುನಃ ನಿಷೇಧದ ಮುದ್ರೆ ಬೀಳುತ್ತದೆ. ರಮಝಾನ್ ತಿಂಗಳ ಮೊದಲನೇ ತಾರೀಕಿನಂದು ಆರಂಭಗೊಳ್ಳುವ ಈ ಪ್ರಕ್ರಿಯೆ ಒಂದು ತಿಂಗಳ ತನಕ ನಿರಂತರ ಪುನರಾವರ್ತಿಸಲ್ಪಡುತ್ತದೆ. ಮೂವತ್ತು ದಿನಗಳ ಕಾಲ ವ್ಯಕ್ತಿಯನ್ನು ಅತ್ಯಂತ ತೀವ್ರ ಶಿಸ್ತಿನಲ್ಲಿಡಲಾಗುತ್ತದೆ. ಅವನು ನಿರ್ದಿಷ್ಟ ಹೊತ್ತಿನಲ್ಲೇ ಇಫ್ತಾರ್ (ಪ್ರಭಾತಪೂರ್ವ ಭೋಜನ) ಮಾಡಬೇಕು. ನಿರ್ದಿಷ್ಟ ಹೊತ್ತಿನಲ್ಲೇ ಪಾರಣೆ ಮಾಡಬೇಕು. ಅನುಮತಿಯಿರುವ ವೇಳೆಯಲ್ಲಿ ತನ್ನ ದೇಹೇಚ್ಛೆಗಳನ್ನು ಈಡೇರಿಸಿಕೊಳ್ಳುತ್ತಿರಬೇಕು. ಆದರೆ ಅನುಮತಿ ಮುಗಿಯುತ್ತಲೇ ನಿಷಿದ್ಧಗೊಳಿಸಲ್ಪಟ್ಟಿರುವ ವಸ್ತುಗಳಿಂದ ದೂರನಿಲ್ಲಬೇಕು.

## ದಾಸ್ಯ ಪ್ರಜ್ಞೆ

ಈ ತರಬೇತಿ ವ್ಯವಸ್ಥೆಯನ್ನು ಗಮನಿಸಿದರೆ ಮೊಟ್ಟ ಮೊದಲು ಒಂದು ಅಂಶ ನಮ್ಮ ಗಮನಕ್ಕೆ ಬರುತ್ತದೆ. ಅದೇನೆಂದರೆ ಇಸ್ಲಾಮ್ ಈ ವಿಧಾನದ ಮೂಲಕ ವ್ಯಕ್ತಿಯಲ್ಲಿ ಅಲ್ಲಾಹನ ಪ್ರಭುತ್ವದ ಅಂಗೀಕಾರವನ್ನು ಸುದೃಢಗೊಳಿಸಬಯಸುತ್ತದೆ. ಈ ಪ್ರಜ್ಞೆಯನ್ನು ಅವರಲ್ಲಿ ಎಷ್ಟು ಪ್ರಬಲವಾಗಿ ಬೆಳೆಸಬಯಸುತ್ತದೆಂದರೆ, ಅವರು ತಮ್ಮ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯನ್ನು ಅಲ್ಲಾಹನ ಮುಂದೆ ವಸ್ತುಶಃ ಶರಣುಗೊಳಿಸಬೇಕು. ಈ ಸಮ್ಮತಿ ಮತ್ತು ಅಂಗೀಕಾರವೇ ಇಸ್ಲಾಮಿನ ಸ್ಫೂರ್ತಿಯಾಗಿದೆ. ಇದರ ಆಧಾರದಲ್ಲೇ ವ್ಯಕ್ತಿ ಮುಸ್ಲಿಮನಾಗಿದ್ದಾನೋ ಇಲ್ಲವೋ ಎಂಬುದು ನಿರ್ಧರಿಸಲ್ಪಡುತ್ತದೆ. ವ್ಯಕ್ತಿ ದೇವನ ಅಸ್ತಿತ್ವವನ್ನು ಸಮ್ಮತಿಸುವುದು ಅಥವಾ ಈ ನಿಸರ್ಗದ ವ್ಯವಸ್ಥೆಯನ್ನು ರೂಪಿಸಿ ನಡೆಸುತ್ತಿರುವವನು ಏಕೈಕನೂ ಅತ್ಯುಗ್ರನೂ ಆದ ಒಬ್ಬ ದೇವನಾಗಿದ್ದಾನೆ ಎಂಬುದನ್ನು ಅನುಭವ ಸಿದ್ಧಾಂತದ (Metaphysics) ರೂಪದಲ್ಲಿ ನಂಬಿಬಿಟ್ಟರೆ ಮಾತ್ರ ಸಾಕೆಂದು ಇಸ್ಲಾಮ್ ಹೇಳುವುದಿಲ್ಲ. ಈ ವಾಸ್ತವಿಕತೆಯನ್ನು ಸಮ್ಮತಿಸಿದ ನಂತರ ಅದರ ತಾರ್ಕಿಕ ಮತ್ತು ಸಹಜ ಪರಿಣಾಮಗಳನ್ನೂ ವ್ಯಕ್ತಿ ಸ್ವೀಕರಿಸಿಕೊಳ್ಳಬೇಕೆಂಬುದು ನೈಜ ಉದ್ದೇಶವಾಗಿದೆ. ಅರ್ಥಾತ್ ಅವನು ತನ್ನ ಮತ್ತು ಸಮಸ್ತ ಲೋಕದ ಸೃಷ್ಟಿಕರ್ತ, ಪರಿಪಾಲಕ, ವ್ಯವಸ್ಥಾಪಕ ಮತ್ತು ನಿಯಾಮಕ, ಅಲ್ಲಾಹನು ಮಾತ್ರವಾಗಿದ್ದಾನೆ ಎಂದು ಸಮ್ಮತಿಸುತ್ತಾನೆ. ಸೃಷ್ಟಿಯಲ್ಲಾಗಲಿ, ಪರಿಪಾಲನೆಯಲ್ಲಾಗಲಿ, ವ್ಯವಸ್ಥಾಪಿಸುವ ಮತ್ತು ಯೋಚಿಸವ

ಪ್ರಕ್ರಿಯೆಯಲ್ಲಾಗಲಿ ಅವನಿಗಾರೂ ಸಹಭಾಗಿಗಳಿಲ್ಲವೆಂದು ಅಂಗೀಕರಿಸಿದ ಜತೆಗೇ ಅವನು ಅಲ್ಲಾಹನ ಪ್ರಭುತ್ವ ಮತ್ತು ಆಜ್ಞಾಧಿಕಾರದ ಮುಂದೆ ಮಂಡಿಯೂರಿಸಬೇಕಾಗಿದೆ. ತನ್ನ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯ ದುರುಪಯೋಗದಿಂದ ವೈಚಾರಿಕವಾಗಿಯೂ ಪ್ರಾಯೋಗಿಕವಾಗಿಯೂ ದೂರ ನಿಲ್ಲಬೇಕಾಗಿದೆ. ದಾಸ ತನ್ನ ಯಜಮಾನನ ಮಟ್ಟಿಗೆ ಯಾವ ದೋರಣೆಯನ್ನು ತಳೆಯಬೇಕಾಗಿದೆಯೋ ಅದೇ ಧೋರಣೆಯನ್ನು ಅವನು ಅಲ್ಲಾಹನ ಮಟ್ಟಿಗೆ ತಳೆಯಬೇಕಾಗಿದೆ. ಇದು ಸತ್ಯನಿಷೇಧ ಮತ್ತು ದೇವಾನುಸರಣೆಯನ್ನು ಪ್ರತ್ಯೇಕಿಸುವ ಸಾಧನವಾಗಿದೆ.

ವ್ಯಕ್ತಿ ಅಲ್ಲಾಹನ ಮುಂದೆ ತಾನು ಸ್ವತಂತ್ರ ಮತ್ತು ಹೊಣೆ ಮುಕ್ತನೆಂದು ಭಾವಿಸುವುದು ಮತ್ತು ಈ ಭಾವನೆಯ ಆಧಾರದಲ್ಲಿ ತನ್ನ ಜೀವನದ ಮಾರ್ಗವನ್ನು ಗೊತ್ತುಪಡಿಸಿಕೊಳ್ಳುವುದೇ ಸತ್ಯನಿಷೇಧವಾಗಿದೆ. ವ್ಯಕ್ತಿ ತನ್ನನ್ನು ಅಲ್ಲಾಹನ ದಾಸ ಮತ್ತು ಅವನ ಮುಂದೆ ಜವಾಬ್ದಾರಿಕೆಯುಳ್ಳವನೆಂದು ಭಾವಿಸುವುದು ಮತ್ತು ಈ ಭಾವನೆಯ ಆಧಾರದಲ್ಲಿ ಜೀವನ ಸಾಗಿಸುವುದೇ ದೇವಾನುಸರಣೆಯಾಗಿದೆ. ಸತ್ಯನಿಷೇಧದ ಸ್ಥಿತಿಯಿಂದ ದೇವಾನುಸರಣೆಯೆಡೆಗೆ ಮರಳಲು ಅಲ್ಲಾಹನ ಪ್ರಭುತ್ವದ ನೈಜ ಮತ್ತು ಹಾರ್ದಿಕ ಅಂಗೀಕಾರ ಅವಶ್ಯಕವಾಗಿದೆ. ಅಂತೆಯೇ ವ್ಯಕ್ತಿಯ ಹೃದಯದಲ್ಲಿ ದಾಸ್ಯಪ್ರಜ್ಞೆ ಸದಾ ಹಸಿರಾಗಿರಬೇಕು. ಪ್ರತಿ ನಿಮಿಷವೂ ನಿತ್ಯ ನೂತನವಾಗಿರಬೇಕು. ಏಕೆಂದರೆ ಈ ಪ್ರಜ್ಞೆ ಮತ್ತು ಭಾವನೆ ಮನಸ್ಸಿನಿಂದ ದೂರವಾಗುತ್ತಲೇ ಸ್ವಾಯತ್ತತೆ ಮತ್ತು ಬೇಜವಾಬ್ದಾರಿತನದ ಭಾವನೆ ಪುಟಿದೇಳುತ್ತದೆ. ಸತ್ಯನಿಷೇಧದ ಭಾವನೆ ಅವನನ್ನು ಆವರಿಸಿಕೊಳ್ಳುತ್ತದೆ. ದೇವನು ತನ್ನ ಆಜ್ಞಾಧಿಕಾರಿಯಲ್ಲ ಮತ್ತು ತಾನು ಅವನ ಮುಂದೆ ಜವಾಬ್ದಾರನಲ್ಲ ಎಂಬ ಭಾವನೆಯೊಂದಿಗೆ ವ್ಯಕ್ತಿ ಕೆಲಸ ಮಾಡಲಾರಂಭಿಸುತ್ತಾನೆ.

ಈ ಮೊದಲು ವಿವರಿಸಲಾಗಿರುವಂತೆ ನಮಾಝಿನ ಪ್ರಾಥಮಿಕ ಉದ್ದೇಶ ಮಾನವನಲ್ಲಿ ಇಸ್ಲಾಮಿನ ಈ ಸ್ಥಿತಿಯನ್ನು ನಿರಂತರ ಜಾಗೃತಗೊಳಿಸುವುದಾಗಿದೆ. ಉಪವಾಸ ವ್ರತದ ಉದ್ದೇಶವೂ ಇದುವೇ ಆಗಿದೆ. ಇವೆರಡರ ನಡುವಿನ ವ್ಯತ್ಯಾಸವೇನೆಂದರೆ ನಮಾಝ್ ಪ್ರತಿನಿತ್ಯ ಸ್ವಲ್ಪ ಸಮಯದ ಅಂತರದಲ್ಲಿ ಅನತಿ ಹೊತ್ತಿನಲ್ಲಿ ಈ ಭಾವನೆಯನ್ನು ಜಾಗೃತಗೊಳಿಸುತ್ತದೆ. ರಮಝಾನ್ ತಿಂಗಳ ಉಪವಾಸ ವ್ರತ ವರ್ಷಕ್ಕೊಂದಾವರ್ತಿ 720 ಗಂಟೆಗಳ ತನಕ ವ್ಯಕ್ತಿಯ ಮೇಲೆ ಈ ಸ್ಥಿತಿಯನ್ನು ಕಾಯ್ದಿಡುತ್ತದೆ. ವರ್ಷದ ಉಳಿದ ಹನ್ನೊಂದು ತಿಂಗಳ ಅವಧಿಯಲ್ಲಿ ಅದರ ಪರಿಣಾಮ ಬಾಕಿಯಿರುವಂತೆ ಶಕ್ತಿಯುತವಾಗಿ ಈ ಭಾವನೆಯನ್ನು ವ್ಯಕ್ತಿಯ ಮನಮಸ್ತಿಷ್ಕಗಳಲ್ಲಿ ಲೀನಗೊಳಿಸುತ್ತದೆ.

ಮೊದಲನೆಯದಾಗಿ ದೇವನನ್ನು ತನ್ನ ಪರಮ ಪ್ರಭು ಎಂದು ಭಾವಿಸಿ ಅವನ ಮುಂದೆ ತನ್ನೆಲ್ಲಾ ಸ್ವಾತಂತ್ರ್ಯ ಮತ್ತು ಸ್ವಾಯುತ್ತತೆಗಳಿಂದ ಮುಕ್ತನಾಗದೆ ವ್ಯಕ್ತಿ ಉಪವಾಸದ ಕಠಿಣ ನಿಯಮಗಳನ್ನು ಜಾರಿಗೊಳಿಸಲು ಪ್ರಥಮ ದಿನದಿಂದಲೇ ಸನ್ನದ್ಧನಾಗಲು ಸಾಧ್ಯವಿಲ್ಲ. ಅನಂತರ ಅವನು ದಿನದ ಹೊತ್ತು ನಿರಂತರ ಹನ್ನೆರಡು ಹದಿಮೂರು ಗಂಟೆಗಳ ತನಕ ಅನ್ನ-ಪಾನಿಯ ಮತ್ತು ಸಂಸರ್ಗದಿಂದ ದೂರನಿಲ್ಲುತ್ತಾನೆ. ಪ್ರಭಾತ ಪೂರ್ವ ಭೋಜನದ ಅವಧಿ ಮುಗಿಯುತ್ತಲೇ ಮನಸೇಚ್ಛೆಗಳಿಗೆ ಹಠಾತ್ತನೆ ಲಗಾಮು ಹಾಕುತ್ತಾನೆ. ಪಾರಣೆಯ

ಹೊತ್ತಾಗುತ್ತಲೇ, ಆ ತನಕ ತನ್ನ ಗಂಟಲು, ಬಾಯಿ ಮತ್ತು ಕರಗಳು ಇತರರ ನಿಯಂತ್ರಣದಲ್ಲಿದ್ದುವೋ ಎಂಬಂತೆ ಅವನು ತನ್ನ ಮನದಿಂಗಿತವನ್ನು ತಣಿಸಲು ಧಾವಿಸುತ್ತಾನೆ. ಆ ತನಕ ಅವನ ಕೈ, ಬಾಯಿಗಳು ಯಾರೋ ಬಂಧಿಸಿದ್ದರಿಂದ ಬಂಧನಕ್ಕೊಳಗಾಗಿ, ಅವರು ತೆರೆದರೆ ಮಾತ್ರ ಸ್ವತಂತ್ರ್ಯಗೊಳ್ಳುವಂತಾಗಿರುತ್ತದೆ ಅವನ ಸ್ಥಿತಿ. ಈ ಅವಧಿಯಲ್ಲಿ ಅಲ್ಲಾಹನ ಪ್ರಭುತ್ವ ಮತ್ತು ದಾಸ್ಯ ಭಾವನೆ ಅವನನ್ನು ಸದಾ ಆವರಿಸಿಕೊಂಡಿತ್ತು ಎಂಬುದು ಇದರರ್ಥವಾಗಿದೆ. ನಿರಂತರ ಒಂದು ತಿಂಗಳ ಅವಧಿಯಲ್ಲಿ ಈ ಭಾವನೆ ಮತ್ತು ಪ್ರಜ್ಞೆ ಅವನ ಅಂತಃ ಪ್ರಜ್ಞೆಯಿಂದ ಒಂದು ನಿಮಿಷದ ಮಟ್ಟಿಗೂ ಕಣ್ಮರೆಯಾಗಿರಲಿಲ್ಲ. ಅನ್ಯಥಾ ಅವನು ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಲು ಸಾಧ್ಯವೇ ಇರಲಿಲ್ಲ.

## ಆಜ್ಞಾನುಸರಣೆ

ದಾಸ್ಯ ಪ್ರಜ್ಞೆಯ ಸಹಜ ಪರಿಣಾಮವೆಂಬಂತೆ ಹುಟ್ಟಿಕೊಳ್ಳುವ ಮತ್ತೊಂದು ವಿಷಯ, ವ್ಯಕ್ತಿ ತಾನು ಯಾರ ದಾಸನಾಗಿದ್ದೇನೆಂದು ಭಾವಿಸುತ್ತಾನೋ ಅವನ ಆಜ್ಞಾನುಸರಣೆ ಮಾಡುವುದಾಗಿದೆ. ಈ ಎರಡರ ನಡುವೆ ಎಷ್ಟು ಸಹಜ ಮತ್ತು ತಾರ್ಕಿಕವಾದ ಸಂಬಂಧವಿದೆಯೆಂದರೆ. ಅವೆರಡು ಎಂದೂ ಪರಸ್ಪರ ಪ್ರತಿಕೂಲವಾಗಿರಲು ಸಾಧ್ಯವೇ ಇಲ್ಲ. ಏಕೆಂದರೆ ದೇವತ್ವದ ಅಂಗೀಕಾರದ ಪರಿಣಾಮವೇ ಅನುಸರಣೆಯಾಗಿದೆ. ಯಾರನ್ನೇ ಅನುಸರಿಸಬೇಕಾದರೂ ಮೊದಲು ಅವನ ದೇವತ್ವವನ್ನು ಸಮ್ಮತಿಸಬೇಕು. ನಿಜವಾಗಿ ಯಾರದೇ ದೇವತ್ವವನ್ನು* ಅಂಗೀಕರಿಸಿದ ನಂತರ ಅದರ ದಾಸ್ಯ ಮತ್ತು ಅನುಸರಣೆಯಿಂದ ವಿಮುಖನಾಗಲು ಸಾಧ್ಯವಿಲ್ಲ.

ಯಾರದೇ ಆಜ್ಞಾಧಿಕಾರವನ್ನು ಸಮ್ಮತಿಸದೇ ವಿನಾ ಕಾರಣ ಆಜ್ಞಾ ಪಾಲನೆ ಮಾಡುವಷ್ಟು ಮೂರ್ಖತನ ಮಾನವನಿಗಿಲ್ಲ. ಹಾಗೆಯೇ ಮನಮಸ್ತಿಷ್ಕಗಳಿಂದ ನಿಜವಾಗಿಯೂ ಓರ್ವನನ್ನು ಆಜ್ಞಾಧಿಕಾರವಿರುವ ಪರಮಾಧಿಕಾರಿ ಮತ್ತು ಲಾಭ - ನಷ್ಟಗಳನ್ನುಂಟು

---

** ವಾಚಕರು ಕೆಲವು ಪದಗಳನ್ನು ಚೆನ್ನಾಗಿ ಮನನ ಮಾಡಿಕೊಳ್ಳುವುದು ಅತ್ಯವಶ್ಯಕ. ದೇವತ್ವ ಎಂಬುದು 'ಖುದಾವಂದಿ' ಎಂಬ ಉರ್ದುಪದದ ಭಾಷಾಂತರವಾಗಿದೆ. ಫಾರ್ಸಿ ಭಾಷೆಯಲ್ಲಿ 'ಖುದಾ' ಎಂಬ ಪದಕ್ಕೆ ಅರಬಿಯ 'ಇಲಾಹ್' ಅಥವಾ 'ರಬ್ಬ್' ಎಂಬ ಪದಕ್ಕೆ ಇರುವ ಅರ್ಥವೇ ಇದೆ. ಇಂಗ್ಲೀಷ್‌ನಲ್ಲಿ ಸಣ್ಣಕ್ಷರ(Small Letter) ದಿಂದ ಆರಂಭಗೊಳ್ಳುವ 'god' ಎಂಬ ಪದವೂ ಇದೇ ಅರ್ಥವನ್ನು ಹೊಂದಿದೆ. ಹಿಂದಿ ಭಾಷೆಯಲ್ಲಿ 'ದೇವತಾ' ಎಂಬ ಪದವೂ ಇದಕ್ಕೆ ಹತ್ತಿರದ ಅರ್ಥವನ್ನು ಹೊಂದಿದೆ. ಮಾನವನಿಗೆ ಲಾಭ-ನಷ್ಟಗಳನ್ನುಂಟು ಮಾಡುವ ಅಧಿಕಾರವನ್ನು ಹೊಂದಿರುವ ಶಕ್ತಿಯ ಪಾಲಿಗೆ, ಲೋಕದ ವಿಭಿನ್ನ ಸಮುದಾಯಗಳು ಈ ಎಲ್ಲಾ ಪದಗಳನ್ನು ಉಪಯೋಗಿಸುತ್ತಿವೆ. ನಿಸರ್ಗದ ವ್ಯವಸ್ಥೆಯಲ್ಲಿ ಯಾರ ಸಣ್ಣ ಅಥವಾ ದೊಡ್ಡ ಪ್ರಮಾಣದ ಆದೇಶಗಳು ಕಾರ್ಯತತ್ಪರವಾಗಿದೆಯೋ ಮತ್ತು ಯಾರ ದಾಸ್ಯ ಕೈಗೊಳ್ಳುವುದರಲ್ಲಿ ಮಾನವನ ವಿಜಯ ಅಡಕವಾಗಿದೆಯೋ ಅದರ ಪಾಲಿಗೆ ಈ ಪದ ಅನ್ವಯವಾಗುತ್ತದೆ. ಇಂತಹ ಹಲವಾರು ಶಕ್ತಿಗಳಿವೆ ಎಂಬುದು ಹಿಂದೆಯೂ ಈಗಲೂ ಅಜ್ಞಾನದಲ್ಲಿ ಸಿಲುಕಿಕೊಂಡಿರುವ ಸಮುದಾಯಗಳ ನಂಬಿಕೆಯಾಗಿದೆ. ಅವರ ಪ್ರಕಾರ ದೇವಚರರೇ ಮುಂತಾದ ಮಾನವಾತೀತ ಸೃಷ್ಟಿಗಳು ಮಾತ್ರ ಈ ಸಾಲಿನಲ್ಲಿ ಬರುವುದಲ್ಲ. ಬದಲಾಗಿ ರಾಜಮಹಾರಾಜರುಗಳು, ದೇವನ ಸದ್ಭಕ್ತರು ಮತ್ತು ಅಸಾಮಾನ್ಯ ಚಮತ್ಕಾರಗಳನ್ನು ಪ್ರದರ್ಶಿಸುವ ವ್ಯಕ್ತಿಗಳೆಲ್ಲರೂ ಈ ಸಾಲಿನಲ್ಲಿ ಬರುತ್ತಾರೆ. ಆದ್ದರಿಂದಲೇ ಸಾಮಾನ್ಯವಾಗಿ ಎಲ್ಲಾ*

ಮಾಡಬಲ್ಲ ಪರಿಪಾಲಕ ಎಂದು ನಂಬುತ್ತಲೂ ಅವನ ಅನುಸರಣೆಯಿಂದ ವಿಮುಖನಾಗುವಷ್ಟು ಧೈರ್ಯವೂ ಮಾನವನಿಗಿಲ್ಲ. ಒಟ್ಟಿನಲ್ಲಿ ದೇವತ್ವದ ಅಂಗೀಕಾರ ಮತ್ತು ದಾಸ್ಯ ಹಾಗೂ ಅನುಸರಣೆಯ ಪ್ರಕ್ರಿಯೆಯಲ್ಲಿ ಅವಿಭಾಜ್ಯ ಸಂಬಂಧವಿದೆ. ಆದ್ದರಿಂದ ಈ ಎರಡರ ನಡುವೆ ಸಕಲ ಸ್ತರಗಳಲ್ಲಿ ಸಾಮ್ಯತೆ ಇರಬೇಕಾದುದು ಬುದ್ಧಿ ಮತ್ತು ತರ್ಕದ ಬೇಡಿಕೆಯಾಗಿದೆ.

ಪ್ರಭುತ್ವ ಮತ್ತು ದೇವತ್ವಕ್ಕೆ ಸಂಬಂಧಿಸಿದಂತೆ ಏಕನಿಷ್ಠೆಯಿದ್ದರೆ ದಾಸ್ಯ ಮತ್ತು ಅನುಸರಣೆಯಲ್ಲೂ ಏಕ ನಿಷ್ಠೆ ಗೋಚರವಾಗುತ್ತದೆ. ದೇವತ್ವ ಮತ್ತು ಪ್ರಭುತ್ವಕ್ಕೆ ಸಂಬಂಧಿಸಿದಂತೆ ಬಹುದೇವಾರಾಧನೆ ಕೈಗೊಳ್ಳಲಾದರೆ ದಾಸ್ಯ ಹಾಗೂ ಅನುಸರಣೆಯಲ್ಲೂ ಬಹುದೇವಾರಾಧನೆ ಪ್ರಕಟವಾಗುತ್ತದೆ. ನೀವು ಓರ್ವನನ್ನು ಪ್ರಭು ಎಂದು ಭಾವಿಸಿದರೆ ಓರ್ವನನ್ನೇ ಅನುಸರಿಸುತ್ತೀರಿ. ಹತ್ತು ಮಂದಿಯನ್ನು ಪ್ರಭು ಎಂದು ಭಾವಿಸಿದರೆ ದಾಸ್ಯದ ದಿಕ್ಕೂ ಹತ್ತು ಮಂದಿಯೆಡೆಗೆ ತಿರುಗುತ್ತದೆ. ಹತ್ತು ಮಂದಿಯ ಪ್ರಭುತ್ವವನ್ನು ಅಂಗೀಕರಿಸಿದ ನಂತರ ಓರ್ವನ ದಾಸ್ಯ

---

*ಭಾಷೆಗಳಲ್ಲೂ 'ದೇವ' ಎಂಬ ಪದದ ಬಹುವಚನವಿದೆ. ಉದಾಹರಣೆಗೆ ಅರಬಿಯ 'ಆಲಿಹ' ಮತ್ತು 'ಅರ್‌ಬಾಬ್', ಫಾರ್ಸಿಯ 'ಖುದಾಯಿಗಾನ್' ಮತ್ತು 'ಖುದಾವಂದಾನ್' ಇಂಗ್ಲಿಷ್‌ನ 'gods' ಮತ್ತು ಹಿಂದಿಯ 'ದೇವಿಯೋಂ ಮತ್ತು ದೇವತಾವೊಂ' ಮುಂತಾದ ಪದಗಳು ಬಹುವಚನದಲ್ಲಿದೆ.*

*ಆದರೆ ಇವೆಲ್ಲಾ ಆರಾಧ್ಯರುಗಳಿಗಿಂತ ಮೇಲಿನ ಮತ್ತೊಂದು ಶಕ್ತಿಯ ಕಲ್ಪನೆಯೂ ಎಲ್ಲಾ ಸಮುದಾಯಗಳಲ್ಲಿದೆ. ಆ ಶಕ್ತಿಯೇ ನಿಸರ್ಗದ ಸೃಷ್ಟಿಕರ್ತ ಮತ್ತು ಸರ್ವೋನ್ನತ.*

*ಅರಬಿಯಲ್ಲಿ ಅಲ್ಲಾಹ್, ಫಾರ್ಸಿಯಲ್ಲಿ 'ಖುದಾಯೆ ಖುದಾಯಿಗಾನ್' ಇಂಗ್ಲೀಷ್‌ನಲ್ಲಿ ದೊಡ್ಡಕ್ಷರದಿಂದ (Capital letter) ಆರಂಭಗೊಳ್ಳುವ 'God' ಮತ್ತು ಹಿಂದಿಯಲ್ಲಿ 'ಪರಮೇಶ್ವರ್' ಎಂಬುದು ಆ ಶಕ್ತಿಗೆ ಅನ್ವಯವಾಗುವ ಹೆಸರಾಗಿದೆ. ಇದಕ್ಕೆ ಯಾವ ಭಾಷೆಯಲ್ಲೂ ಬಹುವಚನವಿಲ್ಲ.*

*ಯಾವ ಅಧಿಕಾರ ಮತ್ತು ಶಕ್ತಿಗಳಿಗಾಗಿ ನೀವು ಆರಾಧ್ಯ ಮತ್ತು ದೇವ ಎಂಬ ಪದಗಳನ್ನು ಪಯೋಗಿಸುತ್ತೀರೋ ಅದು ಏಕೈಕ ದೇವನ ಹಸ್ತದಲ್ಲಿದೆ ಎಂಬುದು ಇಸ್ಲಾಮಿನ ಕರೆಯಾಗಿದೆ. ಸಮಸ್ತ ನಿಸರ್ಗದಲ್ಲಿ ಅವನ ಆಜ್ಞೆಯೇ ನಡೆಯುತ್ತಿದೆ. ನಿಮ್ಮ ಲಾಭ-ನಷ್ಟಗಳು ಅವನ ಹಸ್ತದಲ್ಲೇ ಇವೆ. ಇನ್ನು ನೀವು ಪರಮಾಧಿಕಾರ ಉಳ್ಳವರೆಂದು ಬಗೆಯುವ ಮತ್ತು ದೇವರೆಂದು ಬಗೆಯುವ ವ್ಯಕ್ತಿಗಳೆಲ್ಲರೂ ನಿಜವಾಗಿ ಅವನ ದಾಸರಾಗಿದ್ದಾರೆ. ದೇವನ ನೈಜ ಅಧಿಕಾರದಲ್ಲಿ ಅವರಿಗೆ ಕಿಂಚಿತ್ತೂ ಪಾಲಿಲ್ಲ. ಆದ್ದರಿಂದ ನೀವು 'ಇಲಾಹ್', 'ರಬ್ಬ್', 'ಖುದಾವಂದ್', 'ಗಾಡ್', 'ದೇವ್' ಇತ್ಯಾದಿ ಪದಗಳಿಂದ ಕರೆಯುವ ದೇವ ಏಕೈಕನಾಗಿದ್ದಾನೆ. ಅವನನ್ನೇ ನೀವು 'ಅಲ್ಲಾಹ್' ಅಥವಾ ಇತರ ಸಮಾನಾರ್ಥದ ಪದಗಳ ಮೂಲಕ ಸ್ಮರಿಸುತ್ತೀರಿ.*

*ಈ ಬೋಧನೆಯ ಆಧಾರದಲ್ಲಿ ಪದ ಬಳಕೆಯಲ್ಲಿ ಆಗುವ ವ್ಯತ್ಯಾಸವೇನೆಂದರೆ ಮುಸ್ಲಿಮೇತರರು ಅವರ ಹಿಂದಿನ ಪದಗಳನ್ನು ಉಳಿಸಿಕೊಳ್ಳುತ್ತಾರೆ. ಜತೆಗೆ ಅವರು ನೆರೆ ನಂಬುವ ಇತರ ಸಣ್ಣ-ದೊಡ್ಡ ಆರಾಧ್ಯರುಗಳಿಗೆ ಅವರು ಬೇರೆ ಬೇರೆ ಪದಗಳನ್ನು ಉಪಯೋಗಿಸುತ್ತಾರೆ. ಆದರೆ ಮುಸ್ಲಿಮರ ಪಾಲಿಗೆ ಆರಾಧ್ಯ ಮತ್ತು ಒಡೆಯ 'ಅಲ್ಲಾಹ್' ಮಾತ್ರವಾಗಿರುವನು. ಹೀಗೆ ಮುಸ್ಲಿಮರು ದೊಡ್ಡಕ್ಷರದ 'God'ನ್ನು ಮಾತ್ರ ಉಪಯೋಗಿಸುವರು. ದೇವನ ಮಟ್ಟಿಗೆ ಸಣ್ಣಕ್ಷರದ 'god' ಎಂಬ ಪದ ಉಪಯೋಗಿಸಲ್ಪಡುವುದಿಲ್ಲ. ದೇವ್-ದೇವತಾ ಮುಂತಾದ ಪದಗಳು 'ಪರಮೇಶ್ವರ್' ಎಂಬ ಪದದಲ್ಲಿ ಲೀನವಾಗಿ ಬಿಡುತ್ತದೆ. 'ಖುದಾ' ಮತ್ತು 'ಖುದಾವಂದ್' ಎಂಬ ಪದಗಳು 'ಖುದಾವಂದೆ ಆಲಮ್' ಎಂಬ ಪದದಲ್ಲಿ ಐಕ್ಯಗೊಳ್ಳುತ್ತದೆ. ದೇವನಿಗೆ ಉಪಯೋಗಿಸಲ್ಪಡುವ ಯಾವ ಪದದಲ್ಲೂ ಅನಂತರ ಬಹುವಚನದ ಪ್ರಯೋಗ ಇರಲಾರದು.*

ಕೈಗೊಳ್ಳಲು ಎಂದೂ ಸಾಧ್ಯವಿಲ್ಲ.

ನೀವು ಯಾರ ದಾಸ್ಯ ಕೈಗೊಳ್ಳುತ್ತೀರೋ ಅದರ ಆಧಾರದಲ್ಲಿ ನಿಮ್ಮ ಪ್ರಭು ಯಾರು ಎಂದು ನಿರ್ಧರಿಸಲ್ಪಡುತ್ತದೆ. ನೀವು ಯಾರ ದೇವತ್ವವನ್ನು ಅಂಗೀಕರಿಸುತ್ತೀರೋ ನಿಶ್ಚಯವಾಗಿಯೂ ಅವನನ್ನೇ ಅನುಸರಿಸುತ್ತೀರಿ. ಓರ್ವನನ್ನು ದೇವನೆಂದು ನಂಬಿದ ನಂತರ ಇತರರ ಅನುಸರಣೆ ಮಾಡುವುದು ದುಃಸಾಧ್ಯ. ನಿಮ್ಮದು ಕೇವಲ ಬಾಯ್ದೆರೆಯ ಅಂಗೀಕಾರವಾಗಿದ್ದರೆ ನೈಜ ದಾಸ್ಯದಲ್ಲಿ ಅದರಿಂದ ವಿಮುಖವಾಗುವ ಸಾಧ್ಯತೆ ಇದೆ. ಆದರೆ ಅಂಗೀಕಾರ ಹೃದಯ ಮತ್ತು ಆತ್ಮದ ನೈಜ ಪ್ರಜ್ಞೆ ಮತ್ತು ಸನ್ನದ್ಧತೆಯಿಂದ ಕೂಡಿದ್ದರೆ ಅನಂತರ ನಿಮ್ಮ ಕರ್ಮ ಅದಕ್ಕೆ ವಿರುದ್ಧವಾಗಿರಲಾರದು. ನೀವು ನಿಮ್ಮನ್ನು ಯಾರ ದಾಸನೆಂದು ಭಾವಿಸುತ್ತಿರೋ ಅವನ ಬದಲು ನೀವು ದಾಸನೆಂದು ಭಾವಿಸದ ವ್ಯಕ್ತಿಯ ದಾಸ್ಯ ಕೈಗೊಳ್ಳಲು ಸಾಧ್ಯವಿಲ್ಲ. ಇದು ಬುದ್ಧಿಗೆ ನಿಲುಕದ ಮಾತಾಗಿದೆ. ನಿಮ್ಮ ದಾಸ್ಯ ಯಾವ ದಿಸೆಯಲ್ಲಿರುತ್ತದೋ ಅದರ ದೇವತ್ವ ನಿಮ್ಮ ಮೆದುಳಿನಲ್ಲಿ ಅಚ್ಚೊತ್ತಲ್ಪಟ್ಟಿರುತ್ತದೆ. ಇದುವೇ ಬುದ್ಧಿ ನೀಡುವ ತೀರ್ಪು. ಒಂದು ವೇಳೆ ನಾಲಗೆಯಿಂದ ನೀವು ಅದರ ಹೊರತು ಅನ್ಯರ ಪ್ರಭುತ್ವವನ್ನು ಪ್ರಕಟಿಸುತ್ತಿದ್ದರೂ ಸರಿಯೇ.

ದೇವತ್ವದ ಅಂಗೀಕಾರ ಮತ್ತು ದಾಸ್ಯ ಪ್ರಜ್ಞೆಯಲ್ಲುಂಟಾಗುವ ಯಾವುದೇ ಏರುಪೇರು ನಿಶ್ಚಯವಾಗಿಯೂ ಆಜ್ಞಾನುಸರಣೆಯಲ್ಲೂ ಏರುಪೇರನ್ನುಂಟು ಮಾಡುವುದು. ಯಾರದೇ ದೇವತ್ವ ಮತ್ತು ದಾಸ್ಯ ಪ್ರಜ್ಞೆಯ ಭಾವ ನಿಮ್ಮಲ್ಲಿ ಎಷ್ಟು ತೀವ್ರವಾಗಿರುತ್ತದೋ ಅಷ್ಟೇ ತೀವ್ರತೆ ಅನುಸರಣೆಯಲ್ಲೂ ಗೋಚರವಾಗುತ್ತದೆ. ಈ ಪ್ರಜ್ಞೆ ದುರ್ಬಲಗೊಂಡಷ್ಟು ಅನುಸರಣೆಯೂ ದುರ್ಬಲಗೊಳ್ಳುತ್ತದೆ. ಈ ಪ್ರಜ್ಞೆಯೇ ಇಲ್ಲವೆಂದಾದರೆ ಅನುಸರಣೆಯೂ ನಾಸ್ತಿಗೊಳ್ಳುತ್ತದೆ.

ಈ ಪೀಠಿಕೆಯನ್ನು ಮುಂದಟ್ಟು ಮಾಡಿಕೊಂಡರೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಅಲ್ಲಾಹನ ದೇವತ್ವವನ್ನು ಅಂಗೀಕರಿಸಿ ಇತರೆಲ್ಲರ ದೇವತ್ವವನ್ನು ನಿರಾಕರಿಸಬೇಕೆಂಬ ಇಸ್ಲಾಮಿನ ಇಂಗಿತದ ಉದ್ದೇಶ ಮಾನವ ಅಲ್ಲಾಹನ ವಿನಾ ಬೇರಾರ ದಾಸ್ಯವನ್ನೂ ಕೈಗೊಳ್ಳಬಾರದೆಂಬುದಾಗಿದೆ.

أَلَا لِلَّهِ الدِّينُ الْخَالِصُ

"ಎಚ್ಚರಿಕೆ! ಧರ್ಮವು ನಿಷ್ಕಳಂಕವಾಗಿ ಕೇವಲ ಅಲ್ಲಾಹನ ಹಕ್ಕಾಗಿದೆ"* ಎಂದು ಅವನು ಹೇಳುವುದರ ಅರ್ಥ, ಅನುಸರಣೆ ನಿಷ್ಕಳಂಕವಾಗಿ ಅಲ್ಲಾಹನಿಗೆ ಮಾತ್ರವಾಗಿದೆ ಎಂದಾಗಿದೆ. ಇತರರ ಶಾಶ್ವತ ಸ್ವರೂಪದ ಅನುಸರಣೆಯ ಕಲಸುಮೇಲೋಗರ ದೇವನ ಜತೆಗೆ ಸಾಧ್ಯವಿಲ್ಲ.

---

** ಇಲ್ಲಿ 'ದೀನ್' ಎಂಬುದರ ನೈಜ ಅರ್ಥ ಅನುಸರಣೆ ಎಂದಾಗಿದೆ. ಸಮುದಾಯ ಅಥವಾ ಧರ್ಮ ಎಂಬ ಅರ್ಥದಲ್ಲಿ ಅದರ ಉಪಯೋಗವಾಗಲು ಕಾರಣವೇನೆಂದರೆ ಧರ್ಮ ಮತ್ತು ಸಮುದಾಯ ಅನುಸರಣಾ ವ್ಯವಸ್ಥೆಯೊಂದರ ಹೆಸರಾಗಿದೆ. ಅದರ ವರ್ತುಲದೊಳಕ್ಕೆ ಪ್ರವೇಶಿಸಿದ ನಂತರ ವ್ಯಕ್ತಿ ನಿರ್ದಿಷ್ಟ ನಿಯಮ ಮತ್ತು ಕಾನೂನಿನ ಅನುಸರಣೆ ಕೈಗೊಳ್ಳುತ್ತಾನೆ.*

ಆದ್ದರಿಂದಲೇ ಅವನು ಹೀಗೆನ್ನುತ್ತಾನೆ:

وَمَآ أُمِرُوٓا إِلَّا لِيَعْبُدُوا اللَّهَ مُخْلِصِينَ لَهُ الدِّينَ

"ಅವರಿಗೆ ನೀಡಲಾಗಿದ್ದ ಆದೇಶವು ಅವರು ತಮ್ಮ ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೆ ಮಾತ್ರ ಮೀಸಲಾಗಿಟ್ಟು ಏಕನಿಷ್ಠೆಯಿಂದ ಅಲ್ಲಾಹನ ದಾಸ್ಯ ಮಾಡಬೇಕು ಎಂದಾಗಿತ್ತು." (ಅಲ್‌ಬಯ್ಯಿನಃ - 5)

ಮಾನವನು ಅಲ್ಲಾಹನ ದಾಸ್ಯ ಕೈಗೊಳ್ಳಲಿಕ್ಕಾಗಿ ಮಾತ್ರ ನಿಯುಕ್ತಗೊಳಿಸಲ್ಪಟ್ಟಿದ್ದಾನೆ ಎಂಬುದು ಇದರ ಅರ್ಥವಾಗಿದೆ. ಮಾನವ ಅವನ ಅನುಸರಣೆ ಮಾಡುವಾಗ ಇತರರ ಅನುಸರಣೆಯನ್ನು ಗಮನದಲ್ಲಿರಿಸಬಾರದು ಎಂಬುದು ಅದಕ್ಕಿರುವ ಶರತ್ತು. ಆದ್ದರಿಂದಲೇ ಅವನು ಹೀಗೆನ್ನುತ್ತಾನೆ:

قَاتِلُوهُمْ حَتَّىٰ لَا تَكُونَ فِتْنَةٌ وَيَكُونَ الدِّينُ كُلُّهُ لِلَّهِ

" ಫಿತ್ನ (ಕ್ಷೋಭೆ) ಅಳಿದು ಹೋಗುವವರೆಗೂ ಧರ್ಮ ಸರ್ವಸಂಪೂರ್ಣವಾಗಿ ಅಲ್ಲಾಹನಿಗಾಗಿ ಆಗುವವರೆಗೂ ಈ ಸತ್ಯನಿಷೇಧಿಗಳೊಡನೆ ಹೋರಾಡಿರಿ"

(ಅಲ್‌ಅನ್‌ಫಾಲ್: 39)

ಇದರಿಂದ ಸ್ಪಷ್ಟವಾಗಿ ವ್ಯಕ್ತವಾಗುವುದೇನೆಂದರೆ ಮುಸ್ಲಿಮರ ಅನುಸರಣೆ ಸಾರಸಂಪೂರ್ಣವಾಗಿ ಅಲ್ಲಾಹನಿಗೆ ಮಾತ್ರ ಮೀಸಲಾಗಬೇಕಾಗಿದೆ. ಈ ಅನುಸರಣೆಯಲ್ಲಿ ಭಾಗೀದಾರನಾಗಬಯಸುವ ಪ್ರತಿಯೊಂದು ಶಕ್ತಿಯ ವಿರುದ್ಧ ಮುಸ್ಲಿಮನಾದವನು ಸಮರ ಹೂಡಬೇಕಾಗಿದೆ. ದೇವನ ಜತೆ ಅದರ ಅನುಸರಣೆಯನ್ನೂ ಮಾಡಬೇಕು ಅಥವಾ ದೇವನ ವಿನಾ ಅದರ ಅನುಸರಣೆಯನ್ನು ಮಾತ್ರ ಕೈಗೊಳ್ಳಬೇಕೆಂದು ಆ ಶಕ್ತಿಗಳು ಬಯಸುತ್ತವೆ. ಆದ್ದರಿಂದಲೇ ಅಲ್ಲಾಹನು ಹೀಗೆನ್ನುತ್ತಾನೆ:

هُوَ الَّذِي أَرْسَلَ رَسُولَهُ بِالْهُدَىٰ وَدِينِ الْحَقِّ لِيُظْهِرَهُ
عَلَى الدِّينِ كُلِّهِ

"ತನ್ನ ಸಂದೇಶವಾಹಕನನ್ನು ಸನ್ಮಾರ್ಗ ಹಾಗೂ ಸತ್ಯ ಧರ್ಮದೊಂದಿಗೆ ಕಳುಹಿಸಿದವನು ಅಲ್ಲಾಹನೇ ಆಗಿರುತ್ತಾನೆ. ಅದನ್ನು ಸಕಲ ಧರ್ಮಗಳ ಮೇಲೆ ಪ್ರಬಲಗೊಳಿಸಲಿಕ್ಕಾಗಿ (ಅವನು ಹೀಗೆ ಮಾಡಿರುವನು.)" (ಅಲ್‌ಫತಹ್ : 28)

ಇದರಿಂದ ಸ್ಪಷ್ಟವಾಗಿ ವ್ಯಕ್ತವಾಗುವುದೇನೆಂದರೆ ಅಲ್ಲಾಹನ ಅನುಸರಣೆ ಎಲ್ಲರ ಅನುಸರಣೆಯ ಮೇಲೆ ಪ್ರಬಲವಾಗಿರಬೇಕು. ಅನುಸರಣೆ ಮತ್ತು ದಾಸ್ಯದ ಸಂಪೂರ್ಣ ವ್ಯವಸ್ಥೆ ಅದರ ಎಲ್ಲಾ ಸ್ತರಗಳೊಂದಿಗೆ ದೇವಾನುಸರಣೆಗೆ ಅಧೀನಗೊಳ್ಳಬೇಕು. ಯಾರ ಅನುಸರಣೆ ಕೈಗೊಳ್ಳುವುದಿದ್ದರೂ ಅದು ಸರ್ವಶಕ್ತನಾದ ದೇವನ ಅನುಮತಿಗೆ ಬದ್ಧವಾಗಿರಬೇಕು. ಯಾವ ಸ್ವರೂಪದ ಅನುಸರಣೆಗೆ ಅಲ್ಲಿಂದ ಆಜ್ಞೆ ಅಥವಾ ಅನುಮತಿ ದೊರೆಯುವುದಿಲ್ಲವೋ ಆ ಸಂಪರ್ಕವನ್ನು ಕಡಿದುಕೊಳ್ಳಬೇಕು. ಇದು ಅಲ್ಲಾಹನು ತನ್ನ ಪ್ರವಾದಿಯ ಮೂಲಕ

ಕಳುಹಿಸಿದ ಸದ್ಧರ್ಮ ಮತ್ತು ಸನ್ಮಾರ್ಗದರ್ಶನದ ಬೇಡಿಕೆಯಾಗಿದೆ. ಸರ್ವಲೋಕದೊಡೆಯನ ನೈಜ ಮತ್ತು ಮೂಲಭೂತ ಅನುಸರಣೆಯ ಶರತ್ತಿನೊಂದಿಗೆ ಮಾತ್ರವೇ ಇತರರ ಅನುಸರಣೆಯಾಗಿರಬೇಕು. ಇದಕ್ಕೆ ಯಾರೂ ಹೊರತಲ್ಲ. ತಂದೆ-ತಾಯಂದಿರಾಗಲಿ, ಕುಟುಂಬ ಮತ್ತು ಸಮಾಜವಾಗಲಿ, ಸಮುದಾಯ ಮತ್ತು ಸರ್ಕಾರವಾಗಲಿ, ನಾಯಕರಾಗಲಿ, ಹಿರಿಯರು ಅಥವಾ ವಿದ್ವಾಂಸರಾಗಲಿ, ವ್ಯಕ್ತಿ ಹೊಟ್ಟೆ ಹೊರೆಯಲಿಕ್ಕಾಗಿ ಆಶ್ರಯಿಸಿರುವ ವ್ಯಕ್ತಿ ಅಥವಾ ಸಂಸ್ಥೆಯಾಗಲಿ, ವ್ಯಕ್ತಿಯ ಸ್ವಂತ ಆತ್ಮವೇ ಆಗಿರಲಿ, ಅವನ ಸ್ವೇಚ್ಛಾವೃತ್ತಿಯಾಗಿರಲಿ ಇದಕ್ಕೆ ಹೊರತಲ್ಲ. ಅನುಸರಣೆಯ ಕೇಂದ್ರ ಬಿಂದು ಅಲ್ಲಾಹನು ಮಾತ್ರವೇ ಆಗಿದ್ದಾನೆ. ಅಲ್ಲಾಹನ ದೇವತ್ವವನ್ನು ಅಂಗೀಕರಿಸಿ ಸಮಸ್ತ ಜೀವನವನ್ನು ಅವನಿಗೊಪ್ಪಿಸಿದ ನಂತರ, ವ್ಯಕ್ತಿ ಯಾರ ಅನುಸರಣೆ ಮಾಡುವುದಿದ್ದರೂ ಅಲ್ಲಾಹನ ಅನುಸರಣೆಗೆ ಪೂರಕವಾಗಿಯೇ ಮಾಡುತ್ತಾನೆ. ಯಾರ ಮಾತನ್ನು ಯಾವ ಮಟ್ಟದಲ್ಲಿ ಸ್ವೀಕರಿಸಲು ಅಲ್ಲಿಂದ ಅನುಮತಿ ದೊರೆಯುವುದೋ ಅಷ್ಟನ್ನು ಅವನು ಸ್ವೀಕರಿಸುವನು. ಯಾವ ಹಂತಕ್ಕೆ ಅನುಮತಿಯ ಚರಮ ಸೀಮೆ ಮುಗಿಯುವುದೋ, ಅಲ್ಲಿ ಅವನು ಕೇವಲ ದೇವನನ್ನು ಅನುಸರಿಸುವವನಾಗಿರುತ್ತಾನೆ ಮತ್ತು ಇತರೆಲ್ಲರ ಪಾಲಿಗೆ ಬಂಡುಕೋರನಾಗಿರುತ್ತಾನೆ.

ಉಪವಾಸದ ಉದ್ದೇಶ ಮಾನವನಿಗೆ ಇಂತಹ ಅನುಸರಣೆಯ ತರಬೇತು ನೀಡುವುದಾಗಿದೆ. ಅದರ ಮೂಲಕ ವ್ಯಕ್ತಿಯನ್ನು ಒಂದು ತಿಂಗಳ ಅವಧಿಯಲ್ಲಿ ದಿನದಲ್ಲಿ ಹಲವು ಗಂಟೆಗಳ ತನಕ, ವ್ಯಕ್ತಿ ತನ್ನ ಮೂಲಭೂತ ಅವಶ್ಯಕತೆಗಳಿಗೂ ದೇವನ ಆಜ್ಞೆ ಮತ್ತು ಅನುಮತಿಯನ್ನು ಎದುರು ನೋಡುವಂತಹ ಸ್ಥಿತಿಯಲ್ಲಿರಿಸಲಾಗುತ್ತದೆ. ದೇವನ ಅನುಮತಿ ದೊರೆಯುವ ತನಕ ಅವನು ಆಹಾರದ ಒಂದು ತುಣುಕು ಅಥವಾ ನೀರಿನ ಒಂದು ಗುಟುಕನ್ನೂ ಗಂಟಲಿನಿಂದ ಕೆಳಗಿಳಿಸಲಾರ. ಒಂದೊಂದು ವಸ್ತುವನ್ನು ಉಪಯೋಗಿಸುವಾಗಲೂ ಅವನು ದೇವನ ಶರೀಅತ್‌ನೆಡೆಗೆ ನೋಡುತ್ತಾನೆ. ಅಲ್ಲಿ ಸಮ್ಮತವೆನಿಸಿದ್ದನ್ನು ಅವನು ಸಮ್ಮತಾರ್ಹವೆಂದು ಭಾವಿಸುತ್ತಾನೆ. ಸಮಸ್ತ ಲೋಕವು ಒಮ್ಮತದಿಂದ ಅದನ್ನು ನಿಷಿದ್ಧವೆಂದು ಪರಿಗಣಿಸಿದ್ದರೂ ಸರಿಯೇ. ಅಲ್ಲಿ ನಿಷಿದ್ಧವಾಗಿರುವುದನ್ನು ಅವನು ನಿಷಿದ್ಧವೆಂದು ಬಗೆಯುತ್ತಾನೆ. ಸಮಸ್ತ ಲೋಕದ ದೃಷ್ಟಿಯಲ್ಲಿ ಅದು ಸಮ್ಮತವಾಗಿದ್ದರೂ ಸರಿಯೇ. ಈ ಪರಿಸ್ಥಿತಿಯಲ್ಲಿ ದೇವಾನುಮತಿಯ ವಿನಾ ಬೇರಾವುದೂ ಅವನ ಪಾಲಿಗೆ ಅನುಮತಿಯೆನಿಸುವುದಿಲ್ಲ. ಯಾರ ಆಜ್ಞೆಯನ್ನೂ ಅವನು ಆಜ್ಞೆಯೆಂದು ಪರಿಗಣಿಸುವುದಿಲ್ಲ. ಯಾರ ನಿಷೇಧವನ್ನೂ ಅವನು ನಿಷೇಧವೆಂದು ಬಗೆಯುವುದಿಲ್ಲ. ಮುಸ್ಲಿಮನು ಯಾವ ಕಾರಣಕ್ಕೂ ರಮಝಾನ್ ತಿಂಗಳ ಉಪವಾಸ ವ್ರತವನ್ನು ತೊರೆಯುವುದಿಲ್ಲ, ಮುರಿಯುವುದಿಲ್ಲ, ಆ ಬಗ್ಗೆ ಅವನನ್ನು ಒತ್ತಾಯಿಸುವ ಶಕ್ತಿ ಅವನ ಸ್ವೇಚ್ಛೆಗಾಗಲಿ, ಲೋಕದ ಯಾವುದೇ ವ್ಯಕ್ತಿ ಅಥವಾ ಸಂಸ್ಥೆಗಳಿಗಾಗಲಿ ಇಲ್ಲ. ಈ ವಿಷಯದಲ್ಲಿ ಮಗ ತಂದೆಯನ್ನಾಗಲಿ, ಪತ್ನಿ ಪತಿಯನ್ನಾಗಲಿ, ದಾಸ ಯಜಮಾನನ್ನಾಗಲಿ, ಪ್ರಜೆ ಸರ್ಕಾರವನ್ನಾಗಲಿ, ಅನುಯಾಯಿ ನಾಯಕನನ್ನಾಗಲಿ ಅನುಸರಿಸುವುದಿಲ್ಲ. ಬೇರೆ ಪದಗಳಲ್ಲಿ ಹೇಳುವುದಾದರೆ ಅಲ್ಲಾಹನ ನಿಸ್ಸೀಮ ಅನುಸರಣೆ ಬೇರೆಲ್ಲಾ ವಿಧದ ಅನುಸರಣೆಗಳನ್ನು ನಾಸ್ತಿಗೊಳಿಸಿ ಬಿಡುತ್ತದೆ. 720 ಗಂಟೆಗಳ ನಿರಂತರ ಅಭ್ಯಾಸ ಮತ್ತು ತರಬೇತಿಯಿಂದಾಗಿ

ತಾನು ಏಕೈಕ ಪ್ರಭುವಿನ ದಾಸನಾಗಿದ್ದೇನೆ, ಏಕ ಕಾನೂನಿನ ಪಾಲಕನಾಗಿದ್ದೇನೆ ಮತ್ತು ಏಕ ತೆರನಾದ ಅನುಸರಣೆಗೆ ತಾನು ಬದ್ಧನಾಗಿದ್ದೇನೆ ಎಂಬ ಭಾವನೆ ಉಪವಾಸಿಗನ ಮನದಲ್ಲಿ ಶಿಲಾಲೇಖದಂತೆ ಮುದ್ರಿತವಾಗುತ್ತದೆ.

ಹಾಗೆಯೇ ಉಪವಾಸವು ವ್ಯಕ್ತಿಯ ನಿಷ್ಠೆ ಮತ್ತು ಅನುಸರಣೆಯನ್ನು ಎಲ್ಲೆಡೆಯಿಂದ ವಿಮುಖಗೊಳಿಸಿ ಕೇಂದ್ರೀಯ ಅಧಿಕಾರವೊಂದರ ಕಡೆಗೆ ತಿರುಗಿಸಿ ಬಿಡುತ್ತದೆ. ಮೂವತ್ತು ದಿನಗಳ ಕಾಲ ದಿನದ ಹನ್ನೆರಡು ಅಥವಾ ಹದಿನಾಲ್ಕು ಗಂಟೆಗಳ ತನಕ ಅದು ವ್ಯಕ್ತಿಯನ್ನು ಈ ಸ್ಥಿತಿಯಲ್ಲಿರಿಸುತ್ತದೆ. ಆ ಮೂಲಕ ವ್ಯಕ್ತಿಗೆ ತನ್ನ ದಾಸ್ಯದ ಕೇಂದ್ರ ಮತ್ತು ಅನುಸರಣೆಯ ಬಿಂದುವನ್ನು ಚೆನ್ನಾಗಿ ಮನಗಾಣಲು ಸಾಧ್ಯವಾಗುತ್ತದೆ. ರಮಝಾನ್‌ನ ನಂತರ ಈ ಶಿಸ್ತಿನ ಬಂಧನಗಳನ್ನು ಬಿಚ್ಚಿ ಬಿಡಲಾದಾಗ ಅವನ ಅನುಸರಣೆ ಮತ್ತು ನಿಷ್ಠೆ ವಿಭಿನ್ನ ಕೇಂದ್ರಗಳ ಕಡೆಗೆ ಹರಿಹಂಚಾಗಬಾರದೆಂಬುದು ಇದರ ಉದ್ದೇಶ.

ಅನುಸರಣೆಯ ಈ ತರಬೇತಿಗೆ ಬಾಹ್ಯ ನೋಟಕ್ಕೆ ಮಾನವನ ಎರಡು ಬಯಕೆಗಳನ್ನು (ಆಹಾರ ಮತ್ತು ಲೈಂಗಿಕಾಸಕ್ತಿ) ಮಾತ್ರವೇ ಆಯ್ದುಕೊಳ್ಳಲಾಗಿದೆ. ಶಿಸ್ತಿನ ಎಲ್ಲ ನಿಬಂಧನೆಗಳನ್ನೂ ಈ ಎರಡು ಬಯಕೆಗಳಿಗೆ ಸಂಬಂಧಿಸಿದಂತೆ ಮಾತ್ರವೇ ವಿಧಿಸಲಾಗಿದೆ. ಆದರೆ ದೇವನ ದೇವತ್ವದ ಕಲ್ಪನೆ ಮತ್ತು ಅವನ ದಾಸ್ಯದ ಮನೋಭಾವ ಮಾನವನನ್ನು ಪೂರ್ಣವಾಗಿ ಆವರಿಸಿಕೊಳ್ಳಬೇಕೆಂಬುದು ಉಪವಾಸದ ಸ್ಫೂರ್ತಿಯಾಗಿದೆ. ಉಪವಾಸದ ವೇಳೆ ದೇವನು ಯಾವುದರಿಂದ ತಡೆದಿದ್ದಾನೋ ಅದೆಲ್ಲದರಿಂದ, ಆ ಹೊತ್ತಿನಲ್ಲಿ ತಡೆದು ನಿಲ್ಲಬೇಕು. ಯಾವೆಲ್ಲ ವಿಷಯಗಳ ಕುರಿತು ದೇವನು ಆದೇಶಿಸಿದ್ದಾನೋ ಅದರೆಡೆಗೆ ಧಾವಿಸಬೇಕು. ಉಪವಾಸವನ್ನು ಕಡ್ಡಾಯಗೊಳಿಸುವುದರ ನೈಜ ಉದ್ದೇಶ, ಈ ಮನೋಭಾವವನ್ನು ಹುಟ್ಟಿಸುವುದು ಮತ್ತು ಬೆಳೆಸುವುದೇ ಆಗಿದೆ. ಕೇವಲ ಅನ್ನ - ಪಾನೀಯ ಮತ್ತು ಲೈಂಗಿಕ ಸಂಪರ್ಕದಿಂದ ದೂರವಿರುವುದು ಮಾತ್ರ ಅದರ ಉದ್ದೇಶವಲ್ಲ. ಈ ಭಾವನೆಯ ಆಧಿಕ್ಯಕ್ಕೆ ಅನುಸಾರ ಉಪವಾಸವೂ ಪರಿಪೂರ್ಣವೆನಿಸಿಕೊಳ್ಳುತ್ತದೆ. ಈ ಭಾವನೆ ಕಡಿಮೆಯಾದಷ್ಟು ಉಪವಾಸವೂ ಅಪರಿಪೂರ್ಣವೆನಿಸಿಕೊಳ್ಳುತ್ತದೆ.

ಒಬ್ಬ ವ್ಯಕ್ತಿ ಉಪವಾಸ ಮುರಿಯುವ ಎಲ್ಲ ವಸ್ತುಗಳಿಂದ ದೂರವಿದ್ದು, ಅದರ ಜತೆ ದೇವನು ನಿಷೇಧಿಸಿರುವ ಎಲ್ಲ ಕ್ರಿಯೆಗಳನ್ನು ಮಾಡುತ್ತಾ ಮೂರ್ಖತನದ ಉಪವಾಸ ಆಚರಿಸಿದನೆಂದಿಟ್ಟುಕೊಳ್ಳಿ. ಅವನ ಉದಾಹರಣೆಯು ಮಾನವಾಕೃತಿಗೆ ಬೇಕಾದ ಅಂಗಾಂಗಗಳೆಲ್ಲಾ ಸರಿಯಾಗಿರುವ, ಆದರೆ ಪ್ರಾಣವೇ ಇಲ್ಲದಿರುವ ಮಾನವನ ಶವದಂತಿದೆ. ಪ್ರಾಣವೇ ಮಾನವನನ್ನು ಮಾನವನನ್ನಾಗಿ ಮಾಡುತ್ತದೆ. ಪ್ರಾಣವಿಲ್ಲದ ಶವವನ್ನು ಮಾನವನೆಂದು ಕರೆಯಲು ಸಾಧ್ಯವಿಲ್ಲದಂತೆಯೇ ಸ್ಫೂರ್ತಿಹೀನ ಉಪವಾಸವನ್ನು ಉಪವಾಸವೆಂದು ಕರೆಯಲಿಕ್ಕೂ ಸಾಧ್ಯವಿಲ್ಲ. ಅದನ್ನೆ ಪ್ರವಾದಿವರ್ಯರು(ಸ) ಹೀಗೆಂದಿದ್ದಾರೆ:

من لم يدع قول الزور والعمل به فليس لله حاجة في ان
يدع طعامه وشرابه -

"ಯಾರು ಸುಳ್ಳಾಡುವುದನ್ನು ಮತ್ತು ಸುಳ್ಳಾಚರಿಸುವುದನ್ನು ತೊರೆಯುವುದಿಲ್ಲವೋ ಅವನ ಅನ್ನಪಾನೀಯಗಳ ವರ್ಜನೆ ಅಲ್ಲಾಹನಿಗೆ ಬೇಕಾಗಿಲ್ಲ". (ಬುಖಾರಿ, ಕಿತಾಬುಸ್ಸಾಮ್)

ಸುಳ್ಳಾಡುವುದರ ಜತೆಗೆ ಸುಳ್ಳಾಚರಿಸುವುದನ್ನು ಪ್ರಸ್ತಾವಿಸಲಾಗಿರುವುದು ಬಹಳ ಅರ್ಥಗರ್ಭಿತವಾಗಿದೆ. ಸುಳ್ಳು ಎಂಬುದು ಎಲ್ಲಾ ವಿಧದ ಆಜ್ಞೋಲ್ಲಂಘನೆಗಳ ಸಮಾಹಾರವಾಗಿದೆ. ದೇವನನ್ನು ದೇವನೆಂದು ಭಾವಿಸಿದ ನಂತರ ಅವನ ಆಜ್ಞೋಲ್ಲಂಘನೆ ಮಾಡುವವರು ನಿಜವಾಗಿ ತನ್ನ ಅಂಗೀಕಾರವನ್ನೇ ಸುಳ್ಳಾಗಿಸುವವರಾಗಿದ್ದಾರೆ. ಉಪವಾಸದ ನೈಜ ಉದ್ದೇಶವು ತನ್ನ ಕರ್ಮದ ಮೂಲಕ ತಾನು ಅಂಗೀಕರಿಸಿರುವುದನ್ನು ದೃಢ ಪಡಿಸುವುದಾಗಿದೆ. ಆದರೆ ಉಪವಾಸದ ವೇಳೆಯೂ ವ್ಯಕ್ತಿ ತನ್ನ ಅಂಗೀಕಾರವನ್ನು ಸುಳ್ಳಾಗಿಸುತ್ತಿದ್ದರೆ, ಅನಂತರ ಉಪವಾಸದಲ್ಲಿ ಹಸಿವೆ ಮತ್ತು ಬಾಯಾರಿಕೆಯ ವಿನಾ ಬೇರೇನುಳಿಯಿತು? ನಿಜವಾಗಿ ದೇವನಿಗೆ ನೀವು ನಿಮ್ಮ ಜಠರವನ್ನು ಹೀಗೆ ದಂಡಿಸಬೇಕೆಂಬ ಅಗತ್ಯವಿಲ್ಲ. ಇದನ್ನೇ ಪ್ರವಾದಿವರ್ಯರು(ಸ) ಬೇರೆ ಪದಗಳಲ್ಲಿ ಹೀಗೆ ಹೇಳಿದ್ದಾರೆ:

كم من صائم ليس له من صيامه الا الظمأ وكم من قائم
ليس له من قيامه الا السهر-

"ಎಷ್ಟೋ ಉಪವಾಸಿಗರಿದ್ದಾರೆ. ಉಪವಾಸದಿಂದ ಹಸಿವು-ಬಾಯಾರಿಕೆಯ ವಿನಾ ಅವರು ಏನನ್ನೂ ಗಳಿಸುವುದಿಲ್ಲ. ಎಷ್ಟೋ ಮಂದಿ ರಾತ್ರಿ ಜಾಗರಣೆ ಮಾಡುವವರಿದ್ದಾರೆ. ಅವರಿಗೆ ಜಾಗರಣೆಯ ವಿನಾ ಬೇರೇನೂ ದೊರೆಯುವುದಿಲ್ಲ. " (ಸುನನುದ್ದಾರ್)

ಇದನ್ನೇ ಪವಿತ್ರ ಕುರ್‌ಆನ್‌ನಲ್ಲಿ ಅಲ್ಲಾಹನು ಅತ್ಯಂತ ಸ್ಫುಟವಾದ ಭಾಷೆಯಲ್ಲಿ ಹೀಗೆಂದಿದ್ದಾನೆ:

كُتِبَ عَلَيْكُمُ الصِّيَامُ كَمَا كُتِبَ عَلَى الَّذِيْنَ مِنْ قَبْلِكُمْ لَعَلَّكُمْ تَتَّقُوْنَ.

"ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದ್ದಂತೆಯೇ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷವುಂಟಾಗುವುದೆಂದು ಆಶಿಸಲಾಗಿದೆ." (2:183)

ಅರ್ಥಾತ್ ಉಪವಾಸ ವ್ರತವನ್ನು ಕಡ್ಡಾಯಗೊಳಿಸಿರುವುದರ ನೈಜ ಉದ್ದೇಶ ಮಾನವನಲ್ಲಿ ದೇವಭಕ್ತಿಯನ್ನು ಬೆಳೆಸುವುದಾಗಿದೆ. 'ತಕ್ವಾ'ದ ನೈಜ ಅರ್ಥ ಭಯ ಮತ್ತು ಅಂಜಿಕೆಯಾಗಿದೆ. ಇಸ್ಲಾಮೀ ಪಾರಿಭಾಷಿಕದಲ್ಲಿ ಅದರ ಅರ್ಥ ದೇವನನ್ನು ಭಯಪಡುವುದು ಮತ್ತು ಅವನ ಆಜ್ಞೋಲ್ಲಂಘನೆಯಿಂದ ದೂರವಿರುವುದಾಗಿದೆ. ಈ ಪದದ ಬಗ್ಗೆ ನಾನು ಗಮನಿಸಿರುವ ವ್ಯಾಖ್ಯಾನಗಳ ಪೈಕಿ ಅತ್ಯುತ್ತಮವಾದುದು ಉಬೈಬಿನ್ ಕಅಬ್‌ರ ವಿವರಣೆಯಾಗಿದೆ. ಹ. ಉಮರ್(ರ) ಅವರು 'ತಕ್ವಾ' ಎಂದರೇನೆಂದು ಕೇಳಿದರು. ಅವರು ಕೇಳಿದರು, "ಸತ್ಯವಿಶ್ವಾಸಿಗಳ ನಾಯಕರೇ! ಇಕ್ಕೆಲಗಳಲ್ಲೂ ಮುಳ್ಳುಕಂಟಿಗಳು ಆವರಿಸಿರುವ ಕಡಿದಾದ ದಾರಿಯಲ್ಲಿ ನೀವೆಂದಾದರೂ ಸಂಚರಿಸಿದ್ದೀರಾ?" ಹ. ಉಮರ್, "ಹಲವೊಮ್ಮೆ ಸಂಚರಿಸಿದ್ದೇನೆ" ಎಂದು ಉತ್ತರಿಸಿದರು. "ಅಂತಹ ಸಂದರ್ಭದಲ್ಲಿ ನೀವೇನು ಮಾಡುತ್ತೀರಿ?" ಎಂದು ಅವರು

ಕೇಳಿದರು. ಹ. ಉಮರ್(ರ) ಹೇಳಿದರು, "ನಾನು ನನ್ನ ಶರೀರವನ್ನು ಮುದುಡಿಕೊಳ್ಳುತ್ತಾ ಮುಳ್ಳುಗಳಲ್ಲಿ ಸಿಕ್ಕಿಹಾಕಿಕೊಳ್ಳದಂತೆ ನನ್ನನ್ನು ರಕ್ಷಿಸುತ್ತಾ ಸಾಗುತ್ತೇನೆ." "ತಕ್ವಾ ಎಂದರೆ ಇದುವೇ" ಎಂದು ಹ.ಉಬೈ ಬಿನ್ ಕಅಬ್ ಹೇಳಿದರು.

ಮಾನವ ಪ್ರಯಾಣಿಸುತ್ತಿರುವ ಜೀವನ ಯಾತ್ರೆಯಲ್ಲಿ ನಾಲ್ಕೂ ನಿಟ್ಟಿನಲ್ಲಿ ಏರುಪೇರುಗಳು, ಆಸೆ-ಆಕಾಂಕ್ಷೆಗಳು, ಉದ್ದೀಪನೆ- ಪ್ರಲೋಭನೆಗಳು, ಪಥ ಭ್ರಷ್ಟತೆ ಮತ್ತು ಆಜ್ಞೋಲ್ಲಂಘನೆಗಳ ಮುಳ್ಳುಕಂಟಿಗಳು ತುಂಬಿಕೊಂಡಿವೆ. ಈ ಮಾರ್ಗದಲ್ಲಿ ಮುಳ್ಳುಗಳಿಂದ ತನ್ನನ್ನು ರಕ್ಷಿಸಿಕೊಂಡು ನಡೆಯುವುದು ಮತ್ತು ಸತ್ಯಾನುಸರಣೆಯ ಮಾರ್ಗವನ್ನು ತೊರೆದು, ಚಾರಿತ್ರ್ಯಹೀನತೆಯ ಪೊದೆಗಳಲ್ಲಿ ಸಿಕ್ಕಿಹಾಕಿಕೊಳ್ಳದಿರುವುದೇ ದೇವಭಯ ಅಥವಾ 'ತಕ್ವಾ' ಆಗಿದೆ. ಇಂತಹ ದೇವಭಯವನ್ನು ಬೆಳೆಸಲಿಕ್ಕಾಗಿಯೇ ಅಲ್ಲಾಹನು ಉಪವಾಸ ವ್ರತವನ್ನು ಕಡ್ಡಾಯಗೊಳಿಸಿದ್ದಾನೆ. ಇದು ದೇವನಿಷ್ಠೆ ಮತ್ತು ಸತ್ಯಪ್ರಿಯತೆಯನ್ನು ವೃದ್ಧಿಸುವ ಶಕ್ತಿವರ್ಧಕ ಔಷಧವಾಗಿದೆ. ಆದರೆ ಇದರಿಂದ ಶಕ್ತಿಗಳಿಸುವುದು ವ್ಯಕ್ತಿಯ ಅರ್ಹತೆಯನ್ನು ಹೊಂದಿಕೊಂಡಿದೆ. ವ್ಯಕ್ತಿ ಉಪವಾಸದ ಉದ್ದೇಶವನ್ನರಿತು, ಉಪವಾಸ ಪ್ರದಾನಿಸುವಂತಹ ಶಕ್ತಿಯನ್ನು ಗಳಿಸಲು ಸನ್ನದ್ಧನಾಗಿ, ಅದರಿಂದ ತನ್ನಲ್ಲಿ ದೇವಭಯ ಮತ್ತು ದೇವಾನುಸರಣೆಯ ಗುಣವನ್ನು ಬೆಳೆಸಲು ಪ್ರಯತ್ನಿಸಿದರೆ ಅವನಲ್ಲಿ ದೇವಭಯ ಬೆಳೆಯಲು ಸಾಧ್ಯವಿದೆ.. ತನ್ಮೂಲಕ ಅವನು ರಮಝಾನಿನಲ್ಲಿ ಮಾತ್ರವಲ್ಲ, ವರ್ಷದ ಉಳಿದ ಹನ್ನೊಂದು ತಿಂಗಳುಗಳಲ್ಲೂ ಜೀವನದ ಹೆದ್ದಾರಿಯಲ್ಲಿ ಇಕ್ಕೆಲಗಳಲ್ಲಿರುವ ಮುಳ್ಳುಕಂಟಿಗಳಿಂದ ತನ್ನನ್ನು ರಕ್ಷಿಸುತ್ತಾ ಸಾಗಬಹುದಾಗಿದೆ. ಅಂತಹ ಸಂದರ್ಭದಲ್ಲಿ ಅವನ ಪಾಲಿಗೆ ಉಪವಾಸದ ಪುಣ್ಯ ಫಲಗಳು ನಿಸ್ಸೀಮವಾಗಿರುತ್ತವೆ. ಆದರೆ ಅವನು ಉಪವಾಸದ ನೈಜ ಉದ್ದೇಶದಿಂದ ವಿಮುಖನಾಗಿ, ಕೇವಲ ಉಪವಾಸ ಮುರಿಯದಿರುವುದನ್ನೇ ಉಪವಾಸವೆಂದು ಭಾವಿಸಿದರೆ ಮತ್ತು ದೇವಭಯವನ್ನು ಬೆಳೆಸುವತ್ತ ಗಮನಹರಿಸದಿದ್ದರೆ ಅದರ ಪರಿಣಾಮವೂ ಸೀಮಿತವಾಗಿರುತ್ತದೆ. ಅವನು ತನ್ನ ಕರ್ಮಪಟ್ಟಿಯಲ್ಲಿ ಹಸಿವು, ಬಾಯಾರಿಕೆ ಮತ್ತು ರಾತ್ರಿ ಜಾಗರಣೆಯ ವಿನಾ ಮತ್ತೇನನ್ನೂ ಸೇರಿಸಿಕೊಳ್ಳಲಾರ. ಆದ್ದರಿಂದಲೇ ಪ್ರವಾದಿವರ್ಯರು(ಸ) ಹೇಳಿದರು,

كلّ عمل ابن آدم يضاعف الحسنة بعشر امثالها الى سبع

مائة ضعف قال الله تعالى الّا الصوم فانّه لى وانا اجزى به -

"ವ್ಯಕ್ತಿಯ ಪ್ರತಿಯೊಂದು ಕರ್ಮವೂ ದೇವನ ಬಳಿ ನಿಶ್ಚಯವಾಗಿಯೂ ವೃದ್ಧಿಸುತ್ತದೆ. ಒಂದು ಒಳಿತು ಹತ್ತರಿಂದ ಏಳುನೂರು ಪಟ್ಟು ವೃದ್ಧಿಸುತ್ತದೆ. ಆದರೆ ಉಪವಾಸ ಇದಕ್ಕೆ ಹೊರತಾಗಿದೆ. ಏಕೆಂದರೆ ಉಪವಾಸ ನನಗಾಗಿದೆ ನಾನು ಇಚ್ಛಿಸುವಷ್ಟು ಪ್ರತಿಫಲವನ್ನು ಅವನಿಗೆ ಪ್ರದಾನಿಸುತ್ತೇನೆ" (ಬುಖಾರಿ, ಮುಸ್ಲಿಮ್)

ಅರ್ಥಾತ್ ಉಪವಾಸದಲ್ಲಿ ಪುಣ್ಯ ವರ್ಧನೆಯ ಸಾಧ್ಯತೆ ಅಗಣಿತವಾಗಿದೆ. ವ್ಯಕ್ತಿ ಉಪವಾಸದಿಂದ ಎಷ್ಟು ದೇವಭಯವನ್ನು ಗಳಿಸಬಯಸುತ್ತಾನೋ ಅಷ್ಟು ಅದು ವೃದ್ಧಿಸುತ್ತದೆ. ಸೊನ್ನೆಯಿಂದ ಹಿಡಿದು ಲಕ್ಷ, ದಶಲಕ್ಷ, ಕೋಟಿ, ದಶಕೋಟಿಗಳ ಅನುಪಾತದಲ್ಲಿ ಅದು

ಸೀಮಾತೀತವಾಗಿ ವೃದ್ಧಿಸುತ್ತಾ ಹೋಗುತ್ತದೆ. ಉಪವಾಸದಿಂದ ದೇವಭಯವನ್ನು ಗಳಿಸುವುದು ಮತ್ತು ಗಳಿಸದಿರುವುದು, ಹಾಗೆಯೇ ಉಪವಾಸದಿಂದ ಯಾವ ಮಟ್ಟದ ದೇವಭಯವನ್ನು ಗಳಿಸಬೇಕೆಂಬುದು ವ್ಯಕ್ತಿಯ ಅರ್ಹತೆಗೆ ಅನುಗುಣವಾಗಿರುತ್ತದೆ. ಆದ್ದರಿಂದ ಪೂರ್ವೋಕ್ತ ದೇವವಾಣಿಯಲ್ಲಿ, 'ಉಪವಾಸ ಆಚರಣೆಯಿಂದ ನೀವು ನಿಶ್ಚಯವಾಗಿಯೂ ದೇವಭಕ್ತಿಯುಳ್ಳವರಾಗುತ್ತೀರಿ' ಎಂದು ಹೇಳಲಾಗಿಲ್ಲ, ಬದಲಾಗಿ 'ಲಅಲ್ಲಕುಮ್'* ಎಂಬ ಪದವನ್ನು ಬಳಸಲಾಗಿದೆ. ಅದರ ನೈಜ ಅರ್ಥ 'ಆಶಿಸಬಹುದು' ಎಂಬುದಾಗಿದೆ. ಅರ್ಥಾತ್ ನೀವು ಅದರಿಂದಾಗಿ ದೇವಭಕ್ತಿಯುಳ್ಳವರಾಗಲೂ ಬಹುದು ಎಂಬುದಾಗಿದೆ. ಅರ್ಥಾತ್ ನೀವು ಅದರಿಂದಾಗಿ ದೇವಭಕ್ತಿಯುಳ್ಳವರಾಗಲೂಬಹುದು.

## ಚಾರಿತ್ರ್ಯ ನಿರ್ಮಾಣ

ಈ ದೇವಭಯವೇ ನಿಜವಾಗಿ ಇಸ್ಲಾಮಿ ಚಾರಿತ್ರ್ಯದ ಮೂಲಾಧಾರವಾಗಿದೆ. ಇಸ್ಲಾಮ್ ವ್ಯಕ್ತಿಗಳಲ್ಲಿ ಯಾವ ರೀತಿಯ ಚಾರಿತ್ರ್ಯವನ್ನು ಬೆಳೆಸಬಯಸುತ್ತದೋ ಅದರ ಇಸ್ಲಾಮಿ ಕಲ್ಪನೆ 'ತಕ್ವಾ' ಎಂಬ ಪದದಲ್ಲಿ ಅಡಕವಾಗಿದೆ. ಆದರೆ ದುರದೃಷ್ಟವಶಾತ್ ಇಂದು 'ತಕ್ವಾ' ಎಂಬುದು ಅತ್ಯಂತ ಸೀಮಿತ ಅರ್ಥದಲ್ಲಿ ಬಳಕೆಯಾಗುತ್ತಿದೆ. ನಿರ್ದಿಷ್ಟ ಬಗೆಯ ವೇಶ-ಭೂಷಣವನ್ನು ಹೊಂದಿರುವುದು, ಸುವ್ಯಕ್ತವಾಗಿರುವ ಕೆಲವು ಪಾಪಗಳಿಂದ ದೂರವಿರುವುದು, ಮತ್ತು ಸಾರ್ವಜನಿಕರು ಮಹತ್ವ ಕಲ್ಪಿಸಿರುವ ಕೆಲವು ಅಪ್ರಿಯ ವಸ್ತುಗಳಿಂದ ದೂರವಿರುವುದು ಮುಂತಾದವುಗಳು ಮಾತ್ರವೇ ಇಂದು 'ತಕ್ವಾ'ದ ಹೆಸರಿನಿಂದ ಅರಿಯಲ್ಪಡುತ್ತಿದೆ. ನಿಜವಾಗಿ 'ತಕ್ವಾ' ಎಂಬ ಪದ ಬಹಳ ವಿಶಾಲಾರ್ಥವನ್ನು ಹೊಂದಿದೆ. ಅದು ಮಾನವನ ಜೀವನದ ಎಲ್ಲಾ ಅಂಶಗಳನ್ನು ಆವರಿಸಿಕೊಂಡಿದೆ. ಪವಿತ್ರ ಕುರ್‌ಆನ್ ವ್ಯಕ್ತಿಯ ಚಿಂತನೆ ಮತ್ತು ವರ್ತನೆಯ ರೀತಿಯನ್ನು ವಿಧ್ಯುಕ್ತವಾಗಿ ಎರಡು ವಿಧದಲ್ಲಿ ವಿಂಗಡಿಸುತ್ತದೆ.

ಮೊದಲನೆಯ ವಿಧದ ವಿಂಗಡನೆಯಲ್ಲಿ ಮಾನವನ ಪಾತ್ರ ಈ ಕೆಳಗಿನಂತಿರುತ್ತದೆ:

1) ಲೋಕದ ಶಕ್ತಿಗಳ ವಿನಾ ಯಾವುದೇ ಪರಮಶಕ್ತಿ ತನ್ನನ್ನು ನಿಯಂತ್ರಿಸುತ್ತಿದೆ ಎಂದು

---

** ಸಾಮಾನ್ಯವಾಗಿ ಈ ಪದವನ್ನು 'ಏಕೆಂದರೆ' ಎಂದು ಭಾಷಾಂತರಿಸಲಾಗುತ್ತದೆ. ಆದರೆ ನಿಘಂಟಿನ ಪ್ರಕಾರ ಇದು ಅದರ ಸರಿಯಾದ ಭಾಷಾಂತರವಲ್ಲ. لَعَلَّكُمْ 'ಲಅಲ್ಲಕುಮ್' ಪದವು ನಿರೀಕ್ಷೆ, ಸಾಧ್ಯತೆ ಮತ್ತು ನಿಶ್ಚಿತವಲ್ಲದ ಪರೀಕ್ಷೆ ಎಂಬ ಅರ್ಥದಲ್ಲಿ ಅರಬಿಯಲ್ಲಿ ಉಪಯೋಗಿಸಲ್ಪಡುತ್ತದೆ. ಇದಕ್ಕೆ ಪ್ರತಿಯಾಗಿ 'ಏಕೆಂದರೆ' ಎಂಬ ಪದದಲ್ಲಿ ಕೇವಲ ವಿಧ್ಯುಕ್ತತೆಯ ಭಾವವಿದೆ. ಕೇವಲ ಉಪವಾಸದ ವಿಧ್ಯುಕ್ತತೆಯನ್ನು ಪ್ರಸ್ತಾವಿಸುವುದೇ ಉದ್ದೇಶವಾಗಿದ್ದರೆ ಅಲ್ಲಾಹನು لَعَلَّكُمْ تَتَّقُونَ 'ಲಅಲ್ಲಕುಮ್ ತತ್ತಕೂನ್' (ನೀವು ಧರ್ಮನಿಷ್ಠೆಯುಳ್ಳವರಾಗಲೂ ಬಹುದು) ಎಂಬುದರ ಬದಲಾಗಿ لِتَكُونُوا مِنَ الْمُتَّقِينَ 'ಲಿತಕೂನೂ ಮಿನಲ್ ಮುತ್ತಕೀನ್ (ನೀವು ಧರ್ಮನಿಷ್ಠೆಯುಳ್ಳವರಾಗಲೆಂದು) ಎಂದು ಪ್ರಸ್ತಾವಿಸುತ್ತಿದ್ದ. ಜನರು ಇಲ್ಲಿರುವ ಅನಿಶ್ಚಿತ ಧಾಟಿಯನ್ನು ಕಂಡು ಅದರ ಯುಕ್ತಿಯನ್ನು ಅರಿಯದಾದರು. ಆದ್ದರಿಂದಲೇ ಅವರು لَعَلَّ 'ಲಅಲ್ಲ' ಎಂಬುದನ್ನು ಏಕೆಂದರೆ ಎಂದು ಭಾಷಾಂತರಿಸಿದರು. ಆ ಮೂಲಕ ನೇರ ಭಾಷಾಂತರದ ಮೂಲಕ ಸಾಧಿತವಾಗದ್ದನ್ನು ಅವರು ತಪ್ಪಾದ ಭಾಷಾಂತರದಿಂದ ಸಾಧಿಸಬಯಸುತ್ತಾರೆ.*

ಅವನು ನಂಬುವುದಿಲ್ಲ. ಮಾನವಾತೀತವಾದ ಯಾವುದೇ ಶಕ್ತಿಯ ಮುಂದೆ ತಾನು ಜವಾಬ್ದಾರನಲ್ಲ ಎಂದು ಭಾವಿಸುತ್ತಾ ಅವನು ಜೀವನ ಸಾಗಿಸುತ್ತಾನೆ.

2) ಲೌಕಿಕ ಜೀವನವನ್ನೇ ಜೀವನವೆಂದು, ಲೌಕಿಕ ಪ್ರಯೋಜನಗಳನ್ನೇ ಪ್ರಯೋಜನವೆಂದು ಮತ್ತು ಲೌಕಿಕ ನಷ್ಟವನ್ನೇ ನಷ್ಟವೆಂದು ಅವನು ಭಾವಿಸುತ್ತಾನೆ. ಆದ್ದರಿಂದ ಯಾವುದೇ ಕೆಲಸವನ್ನು ಮಾಡುವ ಅಥವಾ ಮಾಡದಿರುವ ತೀರ್ಮಾನವನ್ನು ಅವನು ಲೌಕಿಕ ಹಿತಾಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಮಾಡುತ್ತಾನೆ.

3) ಲೌಕಿಕ ಪ್ರಯೋಜನಗಳ ಎದುರಿಗೆ ನೀತಿ ಮತ್ತು ಅಧ್ಯಾತ್ಮಿಕ ವಿಶೇಷತೆಗಳನ್ನು ಅವನು ನಿಕೃಷ್ಟವೆಂದು ಭಾವಿಸುತ್ತಾನೆ. ಭೌತಿಕ ನಷ್ಟಕ್ಕೆ ಹೋಲಿಸಿದರೆ ನೈತಿಕ ಮತ್ತು ಆಧ್ಯಾತ್ಮಿಕ ನಷ್ಟಗಳು ನಗಣ್ಯವೆಂದು ಅವನು ಕಲ್ಪಿಸುತ್ತಾನೆ.

4) ಅವನು ಯಾವುದೇ ಸ್ಥಿರ ನೈತಿಕ ನಿಯಮಗಳನ್ನು ಪಾಲಿಸುವುದಿಲ್ಲ. ಸಂದರ್ಭಕ್ಕನುಸಾರ ಸ್ವತಃ ನೈತಿಕ ನಿಯಮಗಳನ್ನು ಗೊತ್ತುಪಡಿಸಿಕೊಳ್ಳುತ್ತಾನೆ ಮತ್ತು ಅವಶ್ಯ ಬಂದಾಗ ಸ್ವತಃ ಅದನ್ನು ಬದಲಿಸಿಕೊಳ್ಳುತ್ತಾನೆ.

ಎರಡನೇ ವಿಧದ ವಿಂಗಡನೆ ಈ ಕೆಳಗಿನಂತಿದೆ:

1) ಪ್ರತ್ಯಕ್ಷ - ಪರೋಕ್ಷಗಳನ್ನು ಬಲ್ಲ ಉನ್ನತ ಆಜ್ಞಾಧಿಕಾರಿಗೆ ತಾನು ಸದಾ ಅಧೀನ ಮತ್ತು ಅವನ ಮುಂದೆ ತಾನು ಉತ್ತರದಾಯಿತ್ವದ ಹೊಣೆಹೊತ್ತವನು ಎಂದು ಅವನು ಭಾವಿಸುತ್ತಾನೆ. ತಾನೊಂದು ದಿನ ತನ್ನ ಜೀವನದ ಸಕಲ ಕರ್ಮಗಳ ಬಗ್ಗೆ ಲೆಕ್ಕ ಸಮರ್ಪಿಸಬೇಕಾದೀತು ಎಂದು ಭಾವಿಸುತ್ತಾ ಅವನು ಜೀವನ ಸಾಗಿಸುತ್ತಾನೆ.

2) ಲೌಕಿಕ ಜೀವನವನ್ನು ಅವನು ನೈಜ ಮಾನವೀಯ ಜೀವನದ ಪ್ರಾಥಮಿಕ ಹಂತ ಮಾತ್ರವೆಂದು ಭಾವಿಸುತ್ತಾನೆ. ಈ ಘಟ್ಟದಲ್ಲಿ ತಲೆದೋರುವ ಪ್ರಯೋಜನ ಮತ್ತು ನಷ್ಟಗಳನ್ನು ಅವನು ತಾತ್ಕಾಲಿಕ ಮತ್ತು ಮಿಥ್ಯವೆಂದು ಭಾವಿಸುತ್ತಾನೆ. ಪರಲೋಕದ ಶಾಶ್ವತ ಜೀವನದ ಪ್ರಯೋಜನಗಳನ್ನು ಮುಂದಿಟ್ಟುಕೊಂಡು ಅವನು ತನ್ನ ಧೋರಣೆಯನ್ನು ರೂಪಿಸಿಕೊಳ್ಳುತ್ತಾನೆ.

3) ಲೌಕಿಕ ಪ್ರಯೋಜನಗಳಿಗೆ ಹೋಲಿಸಿದರೆ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳಿಗೆ ಅವನು ಮಹತ್ವಕಲ್ಪಿಸುತ್ತಾನೆ. ಭೌತಿಕ ನಷ್ಟಕ್ಕೆ ಹೋಲಿಸಿದರೆ, ಆಧ್ಯಾತ್ಮಿಕ ಮತ್ತು ನೈತಿಕ ನಷ್ಟ ಅತ್ಯಂತ ತೀವ್ರವಾದುದೆಂದು ಅವನು ಕಲ್ಪಿಸುತ್ತಾನೆ.

4) ಅವನು ತನ್ನ ಹಿತಾಸಕ್ತಿ ಮತ್ತು ಇಚ್ಛೆಗಳಿಗನುಸಾರ ತಿದ್ದುಪಡಿ ಮಾಡಲಾಗದ ಸ್ಥಿರ ನೈತಿಕ ಸಂಹಿತೆಯನ್ನು ಪಾಲಿಸುತ್ತಾನೆ.

ಈ ಪೈಕಿ ಮೊದಲನೆ ವಿಧದ ಚಿಂತನೆ ಮತ್ತು ಧೋರಣೆಗೆ ಕುರ್‌ಆನ್ ವಿಶಾಲಾರ್ಥದಲ್ಲಿ 'ಫುಜೂರ್'' [1] ಅಥವಾ ಧರ್ಮಭ್ರಷ್ಟತೆ ಎಂದು ಹೆಸರಿಸಿದೆ. ಅಂತೆಯೇ ಎರಡನೆಯ ವಿಧದ ಚಿಂತನೆ ಮತ್ತು ಧೋರಣೆಯನ್ನು 'ತಕ್ವಾ' [2] ಅಥವಾ 'ದೇವನಿಷ್ಠೆ' ಎಂದು ಹೆಸರಿಸಿದೆ.

---

*1. ಇಂದಿನ ಪಾರಿಭಾಷಿಕದಲ್ಲಿ ನಾವದನ್ನು 'ಭೌತಿಕವಾದ' ಸ್ವಾರ್ಥಹಿತಾಸಕ್ತಿ, ಸಮಜಾಯಿಸಿ, ಅಥವಾ ಸಂದರ್ಭಸಾಧಕತನ ಎಂದು ಹೆಸರಿಸಬಹುದಾಗಿದೆ.*

ಇವೆರಡು ನಿಜವಾಗಿ ಪರಸ್ಪರ ತದ್ವಿರುದ್ಧವಾದ ಜೀವನದ ಎರಡು ವಿಭಿನ್ನ ಮಾರ್ಗಗಳಾಗಿವೆ. ಅವೆರಡು ಪರಸ್ಪರ ಆರಂಭದ ಬಿಂದುವಿನಿಂದ ಹಿಡಿದು ಕೊನೆಯ ತನಕ ಎಂದೂ ಒಟ್ಟುಗೂಡುವುದಿಲ್ಲ. ಧರ್ಮಭ್ರಷ್ಟತೆಯ ಮಾರ್ಗವನ್ನು ಅನುಸರಿಸಿದರೆ ವ್ಯಕ್ತಿಯ ಸಮಸ್ತ ಜೀವನ ಅದರ ವಿಭಿನ್ನ ಸ್ತರಗಳ ಸಮೇತ ನಿರ್ದಿಷ್ಟ ರೂಪವನ್ನು ತಳೆಯುತ್ತದೆ. ಅದರಲ್ಲಿ 'ದೇವನಿಷ್ಠೆ'ಯ ಬಾಹ್ಯ ಸ್ವರೂಪ ಒಂದು ವೇಳೆ ಕಾಣಸಿಗಲೂ ಬಹುದು. ಆದರೆ 'ದೇವನಿಷ್ಠೆ'ಯ ನೈಜ ಸ್ಫೂರ್ತಿಯನ್ನು ಆ ಧೋರಣೆಯಲ್ಲಿ ಕಾಣಲು ಸಾಧ್ಯವಿಲ್ಲ. ಏಕೆಂದರೆ ಧರ್ಮಭ್ರಷ್ಟತೆಯ ಹಿಂದೆ ಅಡಕವಾಗಿರುವ ಸರ್ವವಿಧ ಚಿಂತನೆಗಳು ಪರಸ್ಪರ ತಾರ್ಕಿಕ ಸಂಬಂಧವನ್ನು ಹೊಂದಿದೆ. ಧರ್ಮನಿಷ್ಠೆಯ ಹಿಂದೆ ಅಡಕವಾಗಿರುವ ಯಾವುದೇ ಚಿಂತನೆಗಳಿಗೆ ಧರ್ಮಭ್ರಷ್ಟತೆಯ ಆ ಸುಸಂಘಟಿತ ವ್ಯವಸ್ಥೆಯಲ್ಲಿ ಜಾಗ ಸಿಗಲಾರದು.

ಇದಕ್ಕೆ ಪ್ರತಿಯಾಗಿ ದೇವನಿಷ್ಠೆಯ ಮಾರ್ಗವನ್ನು ಅನುಸರಿಸಿದರೆ ಮಾನವನ ಸಮಸ್ತ ಜೀವನದ ಸ್ವರೂಪವೇ ಭಿನ್ನವಾಗುತ್ತದೆ. ಅವನ ಚಿಂತನಾಶೈಲಿ ವಿಶಿಷ್ಟವಾಗಿರುತ್ತದೆ. ಲೋಕದ ಪ್ರತಿಯೊಂದು ವಿಷಯ ಮತ್ತು ಸಮಸ್ಯೆಗಳ ಬಗ್ಗೆ ಅವನ ದೃಷ್ಟಿ ಪ್ರತ್ಯೇಕವಾಗಿರುತ್ತದೆ. ಪ್ರತಿಯೊಂದು ಸಂದರ್ಭದಲ್ಲೂ ಅವನ ಧೋರಣೆ ಭಿನ್ನವಾಗಿರುತ್ತದೆ.

ಈ ಎರಡು ಮಾರ್ಗಗಳ ನಡುವಿನ ವ್ಯತ್ಯಾಸ ಕೇವಲ ವೈಯಕ್ತಿಕ ಜೀವನಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಸಾಮಾಜಿಕ ಜೀವನಕ್ಕೂ ಅದು ಅಷ್ಟೇ ಅನ್ವಯವಾಗುತ್ತದೆ. ಧರ್ಮ ಭ್ರಷ್ಟರಿಂದ ಕೂಡಿದ ಸಮೂಹ, ಅಥವಾ ಧರ್ಮಭ್ರಷ್ಟರೇ ಅಧಿಕ ಸಂಖ್ಯೆಯಲ್ಲಿರುವ ಸಮಾಜ, ಇಲ್ಲವೇ ಧರ್ಮ ಭ್ರಷ್ಟರ ಅಧಿಕಾರವಿರುವ ಸಮಾಜದಲ್ಲಿ ಸಮಸ್ತ ಸಂಸ್ಕೃತಿಯೇ ಭ್ರಷ್ಟವಾಗಿರುತ್ತದೆ. ಅಂತಹ ಸಮಾಜದ ಸಾಮಾಜಿಕ ಧೋರಣೆ, ನೈತಿಕತೆ, ಆರ್ಥಿಕತೆ, ಶಿಕ್ಷಣ ವ್ಯವಸ್ಥೆ, ರಾಜಕೀಯ, ಅಂತರ್ರಾಷ್ಟ್ರೀಯ ನೀತಿ ಮುಂತಾದ ಎಲ್ಲದರಲ್ಲೂ ಧರ್ಮ ಭ್ರಷ್ಟತೆಯ ಸ್ಫೂರ್ತಿ ಕಾರ್ಯ ಪ್ರವೃತ್ತವಾಗಿರುತ್ತದೆ. ಅವರ ಪೈಕಿ ಹಲವರು ಅಥವಾ ಕೆಲವರು ವೈಯಕ್ತಿಕ ಹಿತಾಸಕ್ತಿ ಮತ್ತು ಲಾಭದ ದೃಷ್ಟಿಕೋನವನ್ನು ಮೀರಿ ನಿಲ್ಲುವ ಸಾಧ್ಯತೆ ಇಲ್ಲಿದ್ದಿಲ್ಲ. ಆದರೆ ಹೆಚ್ಚೆಂದರೆ ಅವರು ಸ್ವಹಿತಾಸಕ್ತಿಯನ್ನು ಸಮುದಾಯದ ಹಿತಾಸಕ್ತಿಯಲ್ಲಿ ಲೀನಗೊಳಿಸಬಹುದಷ್ಟೇ. ಅದಕ್ಕಿಂತ ಉನ್ನತಿಗೇರಲು ಅವರಿಗೆ ಸಾಧ್ಯವಿಲ್ಲ. ಸಮುದಾಯದ ಪ್ರಗತಿಯಲ್ಲೇ ಅವರ ಪ್ರಗತಿ ಮತ್ತು ಸಮುದಾಯದ ಪತನದಲ್ಲೇ ಅವರ ಪತನ ಅಡಕವಾಗಿದೆ. ಆದ್ದರಿಂದ ಯಾವುದೇ ವ್ಯಕ್ತಿಯ ಚಾರಿತ್ರ್ಯದಲ್ಲಿ ಧರ್ಮಭ್ರಷ್ಟತೆಯ ಪ್ರಭಾವ ಕಡಿಮೆಯಿದ್ದರೂ ಅದರಿಂದೇನೂ ಪರಿಣಾಮ ಉಂಟಾಗುವುದಿಲ್ಲ. ಅವನು ಪ್ರತಿನಿಧಿಸುವ ಸಮುದಾಯದ ಧೋರಣೆ ಸದಾ ಸ್ವಾರ್ಥ, ಸಂದರ್ಭಸಾಧಕತನ, ಸ್ವಹಿತಾಸಕ್ತಿ ಮತ್ತು ಭೌತಿಕತೆಯನ್ನು ಅವಲಂಬಿಸಿರುತ್ತದೆ.

---

*2. ಪಾಶ್ಚಿಮಾತ್ಯ ಜಗತ್ತು ಈ ಧೋರಣೆಯ ಬಗ್ಗೆ ಬಹುತೇಕ ಅಜ್ಞವಾಗಿದೆ. ಆದ್ದರಿಂದ 'ತಕ್ವಾ' ಎಂಬ ಪದದ ವ್ಯಾಖ್ಯಾನವನ್ನು ನೀಡುವ ಪೂರಕ ಪದವೊಂದನ್ನು ಆಧುನಿಕ ಪಾರಿಭಾಷಿಕದಲ್ಲಿ ಹುಡುಕಿ ತೆಗೆಯುವುದು ಕಷ್ಟಸಾಧ್ಯ. ಆಂಗ್ಲ ಭಾಷೆಯ 'Piety' (ಧರ್ಮನಿಷ್ಠೆ) ಎಂಬ ಪದವನ್ನು ಧರ್ಮ ಪಂಡಿತರು, ಉಪಯೋಗಿಸಲಾರದಷ್ಟರ ಮಟ್ಟಿಗೆ ಕೆಡಿಸಿ ಬಿಟ್ಟಿದ್ದಾರೆ. ಅಲ್ಲದೆ ಆದರಲ್ಲಿ 'ತಕ್ವಾ' ಪದಕ್ಕೆ ಇರುವ ವಿಶಾಲಾರ್ಥವೂ ಇಲ್ಲ.*

ಹಾಗೆಯೇ ದೇವನಿಷ್ಠೆಯೂ ಕೇವಲ ವೈಯಕ್ತಿಕ ಪ್ರಕ್ರಿಯೆಯಲ್ಲ. ಯಾವುದೇ ಸಮಾಜ ದೇವನಿಷ್ಠರಿಂದ ಕೂಡಿದ್ದರೆ, ಅದರಲ್ಲಿ ಧರ್ಮನಿಷ್ಠರ ಆಧಿಕ್ಯವಿದ್ದರೆ, ದೇವನಿಷ್ಠರೇ ಆ ಸಮಾಜದ ನಾಯಕರಾಗಿದ್ದರೆ ಆ ಸಮಾಜದ ಸಾಮೂಹಿಕ ಧೋರಣೆ ಸಾಧ್ಯಂತ ದೇವನಿಷ್ಠೆಯಿಂದ ಕೂಡಿರುತ್ತದೆ. ಆ ಧೋರಣೆ ಸಾಂದರ್ಭಿಕ ಮತ್ತು ತಾತ್ಕಾಲಿಕ ಹಿತಾಸಕ್ತಿಗಳ ಆಧಾರದಲ್ಲಿ ಹುಟ್ಟುವುದಿಲ್ಲ. ಅದು ಶಾಶ್ವತ ಸಂಹಿತೆಯನ್ನು ಆಧರಿಸಿರುತ್ತದೆ. ನಿಶ್ಚಿತ ಧ್ಯೇಯಕ್ಕಾಗಿ ಅದು ತನ್ನ ಸಕಲ ಪ್ರಯತ್ನಗಳನ್ನು ವ್ಯಯಿಸುತ್ತದೆ. ತನ್ನ ಸಮುದಾಯಕ್ಕೆ ಅದರಿಂದ ಯಾವ ಲಾಭನಷ್ಟಗಳಿವೆ ಎಂಬುದನ್ನು ಅದು ಪರಿಗಣಿಸುವುದಿಲ್ಲ. ಭೌತಿಕ ಲಾಭಗಳನ್ನು ಅದು ಬೆಂಬತ್ತಿ ಹೋಗುವುದಿಲ್ಲ. ಶಾಶ್ವತ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳನ್ನೇ ಅದು ಸದಾ ದೃಷ್ಟಿಯಲ್ಲಿರಿಸುತ್ತದೆ. ಸಂದರ್ಭಕ್ಕನುಸಾರ ಅದು ತತ್ವಾದರ್ಶಗಳನ್ನು ರಚಿಸುವ ಮತ್ತು ಮುರಿಯುವ ಕೆಲಸ ಮಾಡುವುದಿಲ್ಲ. ಎಲ್ಲ ಸಂದರ್ಭಗಳಲ್ಲೂ ಅದು ಸತ್ಯದ ಆದರ್ಶಕ್ಕೆ ಬದ್ಧವಾಗಿರುತ್ತದೆ. ಏಕೆಂದರೆ ತನ್ನ ಎದುರಾಳಿ ಸಮುದಾಯಗಳ ಶಕ್ತಿ ಹೆಚ್ಚಿದೆಯೋ ಕಡಿಮೆಯಿದೆಯೋ ಎಂಬುದನ್ನು ಅದು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಬದಲಾಗಿ ದಿವ್ಯಶಕ್ತಿಯನ್ನು ಮಾತ್ರವೇ ಅದು ಭಯ ಪಡುತ್ತದೆ. ಅವನ ಮುಂದೆ ಲೆಕ್ಕ ಸಮರ್ಪಣೆ ಮಾಡಬೇಕಾದ ನಿಶ್ಚಿತ ಅವಧಿಯ ಚಿಂತೆ ಅದನ್ನು ಆವರಿಸಿರುತ್ತದೆ.

ಇಸ್ಲಾಮಿನ ಪ್ರಕಾರ ಲೋಕದಲ್ಲಿರುವ ಎಲ್ಲಾ ಕ್ಷೋಭೆಗಳಿಗೆ ಮತ್ತು ಮಾನವಕುಲದ ವಿನಾಶಕ್ಕೆ ಮೂಲ ಕಾರಣ ಧರ್ಮಭ್ರಷ್ಟತೆಯಾಗಿದೆ. ಅದು ಧರ್ಮಭ್ರಷ್ಟತೆಯ ಈ ವಿಷಸರ್ಪವನ್ನು ಕೊಂದು ಬಿಡಬಯಸುತ್ತದೆ. ಅಥವಾ ಕನಿಷ್ಟಪಕ್ಷ ಅದರ ವಿಷ ಹಲ್ಲುಗಳನ್ನು ಕೀಳಬಯಸುತ್ತದೆ. ಆ ಮೂಲಕ ಒಂದು ವೇಳೆ ಬದುಕಿದ್ದರೂ ಮಾನವಕುಲವನ್ನು ಕಚ್ಚುವ ಸಾಮರ್ಥ್ಯವನ್ನು ಅದು ಕಳೆದುಕೊಳ್ಳುತ್ತದೆ. ಇಸ್ಲಾಮ್, ಈ ಕೆಲಸಕ್ಕಾಗಿ ಮಾನವಕುಲದಲ್ಲಿ ದೇವನಿಷ್ಠೆಯ ಪ್ರವೃತ್ತಿ ಹೊಂದಿರುವವರನ್ನು ಹೆಕ್ಕಿ ತೆಗೆದು ತನ್ನ ಪಕ್ಷದಲ್ಲಿ ಬಡ್ತಿಗೊಳಿಸ ಬಯಸುತ್ತದೆ. ಧರ್ಮಭ್ರಷ್ಟತೆಯ ಪ್ರವೃತ್ತಿ ಹೊಂದಿರುವವರು ಈ ನಿಟ್ಟಿನಲ್ಲಿ ಯಾವ ಪ್ರಯೋಜನಕ್ಕೂ ಬರಲಾರರು. ಸಂದರ್ಭವಶಾತ್ ಅವರು ಮುಸ್ಲಿಮ್ ಮನೆಗಳಲ್ಲಿ ಹುಟ್ಟಿದವರಾಗಿದ್ದರೂ ಮುಸ್ಲಿಮ್ ಸಮುದಾಯದ ನೋವಿನಲ್ಲಿ ಎಷ್ಟು ಸ್ಪಂದಿಸುವವರಾಗಿದ್ದರೂ ಸರಿಯೇ. ಅದಕ್ಕೆ ಎಂತಹ ವ್ಯಕ್ತಿಗಳ ಅಗತ್ಯವಿದೆಯೆಂದರೆ ಅವರು ಕರ್ತವ್ಯ ಪ್ರಜ್ಞೆಯುಳ್ಳವರಾಗಿರಬೇಕು, ತಮ್ಮ ಆತ್ಮಾವಲೋಕನ ಮಾಡಿಕೊಳ್ಳುವವರಾಗಬೇಕು, ತಮ್ಮ ಮನೋಗತ ಮತ್ತು ಸಂಕಲ್ಪದ ತುಲನೆ ಮಾಡುವವರಾಗಬೇಕು, ನಿಯಮಪಾಲನೆ ಮಾಡಲು ಬಾಹ್ಯ ಒತ್ತಡದ ಅಗತ್ಯವಿರುವವರಾಗಿರಬಾರದು, ಅವರ ಅಂತಃ ಪ್ರಜ್ಞೆಯಲ್ಲೇ ಅವಲೋಕನ ಮಾಡುವ ಮತ್ತು ಆಜ್ಞೆ ನೀಡುವ ಭಾವ ಸುಪ್ತವಾಗಿರಬೇಕು, ಅದು ಆಂತರಿಕವಾಗಿ ನಿಯಮ ಪಾಲನೆಗೆ ಅವರನ್ನು ಬದ್ಧಗೊಳಿಸಬೇಕು, ಯಾವುದೇ ಆರಕ್ಷಕ, ನ್ಯಾಯಾಲಯ ಮತ್ತು ಜನಮತಕ್ಕೆ ತಿಳಿಯದಂತಹ ಕಾನೂನುಭಂಜನೆಯ ಬಗ್ಗೆಯೂ ಅದು ಅವರನ್ನು ತಡೆಯಬೇಕು, ದಿವ್ಯ ದೃಷ್ಟಿ ಸದಾ ನಮ್ಮನ್ನು ನೋಡುತ್ತಿದೆ ಎಂದು ಅವರಿಗೆ ಪೂರ್ಣ ವಿಶ್ವಾಸವಿರಬೇಕು, ನಿಶ್ಚಯವಾಗಿಯೂ ದೇವನ ನ್ಯಾಯಾಲಯದ ಮುಂದೆ ಹಾಜರಾಗಿಯೇ ತೀರಬೇಕು ಎಂಬ

ಭಯ ಅವರಿಗಿರಬೇಕು. ಅವರು ಲೌಕಿಕ ಲಾಭಗಳ ದಾಸರಾಗಿರಬಾರದು, ತಾತ್ಕಾಲಿಕ ಸಮಜಾಯಿಷಿಗಳಿಗೆ ಜೋತುಬೀಳುವ ಮತ್ತು ವೈಯಕ್ತಿಕ ಮತ್ತು ಸಾಮುದಾಯಿಕ ಹಿತಕ್ಕೆ ಶರಣು ಹೋಗುವವರಾಗಿರಬಾರದು, ಅವರ ದೃಷ್ಟಿ ಪರಲೋಕದ ನೈಜ ಪರಿಣಾಮಗಳಲ್ಲಿ ನೆಟ್ಟಿರಬೇಕು, ಲೋಕದ ಎಷ್ಟೇ ದೊಡ್ಡ ಲಾಭದ ಆಮಿಷ ಅಥವಾ ತೀವ್ರ ನಷ್ಟದ ಭಯ, ಸರ್ವಲೋಕದೊಡೆಯನು ನಿಶ್ಚಯಿಸಿರುವ ಧ್ಯೇಯ ಮತ್ತು ಅವನು ಸೂಚಿಸಿರುವ ನೈತಿಕ ಆದರ್ಶಗಳಿಂದ ಅವರನ್ನು ದೂರಸರಿಸಬಾರದು, ಅವರ ಎಲ್ಲ ಪ್ರಯತ್ನಗಳ ಅಂತಿಮ ಗುರಿ ಅಲ್ಲಾಹನ ಸಂಪ್ರೀತಿಯಾಗಿರಬೇಕು ಒಂದು ವೇಳೆ ಲೌಕಿಕ ಜೀವನದಲ್ಲಿ ಪರಿಣಾಮ ತದ್ವಿರುದ್ಧವಾಗಿದ್ದರೂ ಸತ್ಯದ ಅನುಸರಣೆಯಲ್ಲೇ ಹಿತವಿದೆ ಮತ್ತು ಅಸತ್ಯದ ಅನುಸರಣೆಯಲ್ಲೇ ನಷ್ಟ ಅಡಕವಾಗಿದೆ, ಎಂಬ ಬಗ್ಗೆ ಅವರಿಗೆ ಪೂರ್ಣ ವಿಶ್ವಾಸವಿರಬೇಕು, ಅನಂತರ ಅದು ಬಯಸುವ ವ್ಯಕ್ತಿಗಳೂ ಅಂತಹವರೇ ಆಗಿರುತ್ತಾರೆ. ಅವರಲ್ಲಿ ತಾಳ್ಮೆ ಎಷ್ಟಿರುತ್ತದೆಂದರೆ ನೈಜ ಮತ್ತು ಉನ್ನತ ಉದ್ದೇಶಕ್ಕಾಗಿ ಅನೇಕ ವರ್ಷಗಳ ತನಕ, ಮಾತ್ರವಲ್ಲ ಕೆಲವೊಮ್ಮೆ ಜೀವನ ಪರ್ಯಂತ ನಿಷ್ಕಾಮ ಕರ್ಮವೆಸಗಲು ಅವರು ಸಿದ್ಧರಿರುತ್ತಾರೆ. ದುಷ್ಟ ಮಾರ್ಗಗಳಲ್ಲಿರುವ ಸೌಲಭ್ಯ, ಲಾಭ, ಸ್ವಾರಸ್ಯಗಳಾವುವೂ ಅವರನ್ನು ತಮ್ಮೆಡೆಗೆ ಸೆಳೆಯಲಾರದು. ಸತ್ಯದ ಮಾರ್ಗದಲ್ಲಿ ಸಾಗಲು ಎಂತಹ ಪರಾಜಯ, ಸಂಕಷ್ಟ, ಅಪಾಯ ಮತ್ತು ಕಷ್ಟ ಕಾರ್ಪಣ್ಯಗಳನ್ನು ಸಹಿಸಬೇಕಾಗಿ ಬಂದರೂ ಅವರ ಪಾದಗಳು ಕಿಂಚಿತ್ತೂ ವಿಚಲಿತವಾಗಲಾರದು, ಎಲ್ಲ ವಿಧದ ತಾತ್ಕಾಲಿಕ ಮತ್ತು ತುರ್ತು ಹಿತಾಸಕ್ತಿಗಳಿಂದ ವಿಮುಖರಾಗಿ ನಿರಂತರ ಉದ್ದೇಶದೆಡೆಗೆ ಸಾಗುವಂತಹ ಏಕಾಗ್ರಚಿತ್ತ ಅವರಲ್ಲಿರುತ್ತದೆ, ಸತ್ಯದ ಪರಿಪಾಲನೆಯಿಂದುಂಟಾಗುವ ದೂರಗಾಮಿ ಪರಿಣಾಮಗಳಿಗಾಗಿ ದೇವನ ಮೇಲೆ ಪೂರ್ಣ ಭರವಸೆಯಿರಿಸುವಂತಹ ದೃಢಚಿತ್ತತೆ ಅವರಲ್ಲಿರುತ್ತದೆ. ಲೌಕಿಕ ಜೀವನದಲ್ಲಿ ತಮ್ಮ ಕರ್ಮಗಳು ಫಲಿಸುವ ಸಾಧ್ಯತೆ ತೀರಾ ನಗಣ್ಯವಾಗಿದ್ದರೂ ಅವರು ವಿಚಲಿತರಾಗಲಾರರು- ಇಂತಹ ವ್ಯಕ್ತಿಗಳ ಚಾರಿತ್ರ್ಯ ಮಾತ್ರವೇ ವಿಶ್ವಾಸಾರ್ಹವಾಗಿರುತ್ತದೆ. ಇಸ್ಲಾಮ್ ತನ್ನ ಕೂಟದಿಂದ ಯಾವ ಕೆಲಸದ ಸಾಕ್ಷಾತ್ಕಾರವನ್ನು ಬಯಸುತ್ತದೋ ಅದಕ್ಕೆ ಇಂತಹ ವಿಶ್ವಸ್ಥ ವ್ಯಕ್ತಿಗಳೇ ಬೇಕು.

'ತಕ್ವಾ' ಅಥವಾ ದೇವನಿಷ್ಠೆಯ ಈ ಪ್ರಾಥಮಿಕ ಅಂಶ ಹೊಂದಿರುವವರಲ್ಲಿ ಈ ಗುಣವನ್ನು ಮತ್ತಷ್ಟು ಪುಷ್ಟೀಕರಿಸಲು ಮತ್ತು ದೃಢೀಕರಿಸಲು ಉಪವಾಸ ವ್ರತಕ್ಕಿಂತ ಪ್ರಬಲವಾದ ಉಪಾಧಿ ಬೇರಾವುದೂ ಇಲ್ಲ. ಉಪವಾಸದ ನಿಯಮಗಳನ್ನು ಗಮನಿಸಿದರೆ, ಅದು ಯಾವ ರೀತಿ ಈ ಗುಣಗಳಿಗೆ ವೈಶಾಲ್ಯ ಮತ್ತು ಸ್ಥಿರತೆಯನ್ನು ಪ್ರಧಾನಿಸುತ್ತದೆಂದು ನಿಮಗೆ ಸ್ವತಃ ವ್ಯಕ್ತವಾಗುತ್ತದೆ. ಜನರಿಗೆ ಹೀಗೆ ಆದೇಶಿಸಲಾಗುತ್ತದೆ- ಉಪವಾಸ ವ್ರತವನ್ನು ದೇವನು ನಿಮ್ಮ ಮೇಲೆ ಕಡ್ಡಾಯಗೊಳಿಸಿದ್ದಾನೆ. ಆದ್ದರಿಂದ ಪ್ರಭಾತದಿಂದ ಪ್ರದೋಶದ ತನಕ ನೀವು ಏನನ್ನೂ ತಿನ್ನಲು ಕುಡಿಯಲು ಬಾರದು. ಯಾವ ವಸ್ತುವನ್ನು ಗಂಟಲೊಳಗೆ ಇಳಿಸಿದರೂ ನಿಮ್ಮ ಉಪವಾಸ ಭಂಗವಾಗುತ್ತದೆ. ಒಂದು ವೇಳೆ ಜನರಿಗೆ ತೋರಿಸಲು ಅನ್ನ-ಪಾನೀಯಗಳಿಂದ ದೂರವಿದ್ದು ತೆರೆಯ ಮರೆಯಲ್ಲಿ ನೀವು ಆಹಾರ ಸೇವನೆ ಮಾಡುತ್ತಿದ್ದರೆ ಮಾನವರ ದೃಷ್ಟಿಯಲ್ಲಿ ನೀವು ಉಪವಾಸಿಗರೆಂದು ಪರಿಗಣಿಸಲ್ಪಡಬಹುದು.

ಆದರೆ ದೇವನ ದೃಷ್ಟಿಯಲ್ಲಿ ನೀವು ಉಪವಾಸಿಗರೆಂದು ಎಂದೂ ಪರಿಗಣಿಸಲ್ಪಡಲು ಸಾಧ್ಯವಿಲ್ಲ. ಉಪವಾಸವನ್ನು ಕೇವಲ ಅಲ್ಲಾಹನಿಗಾಗಿ ಮಾತ್ರ ನಿರ್ವಹಿಸಿದರೆ ಸ್ವೀಕಾರಾರ್ಹವೆನಿಸಿಕೊಳ್ಳುತ್ತದೆ. ಆರೋಗ್ಯ ಪಾಲನೆ ಮತ್ತು ಜನಮೆಚ್ಚುಗೆಗಾಗಿ ಉಪವಾಸ ಆಚರಿಸಿದರೆ ಧೇವನ ದೃಷ್ಟಿಯಲ್ಲಿ ಅದಕ್ಕೆ ಯಾವ ಬೆಲೆಯೂ ಇರಲಾರದು. ದೇವನಿಗಾಗಿ ಉಪವಾಸ ಆಚರಣೆ ಮಾಡಿದಾಗಲೂ ಈ ಲೋಕದಲ್ಲಿ ನಿಮಗೆ ಯಾವುದೇ ಪ್ರತಿಫಲವನ್ನು ನೀಡಲಾಗುವುದಿಲ್ಲ. ಉಪವಾಸ ಮುರಿದರೆ ಅಥವಾ ಆಚರಿಸದಿದ್ದರೆ ಯಾವುದೇ ಶಿಕ್ಷೆ ನೀಡಲಾಗುವುದಿಲ್ಲ. ಮರಣೊತ್ತರ ಜೀವನದಲ್ಲಿ ಅಲ್ಲಾಹನ ಮುಂದೆ ಹಾಜರಾದಾಗಲೇ ಪ್ರತಿಫಲ ಅಥವಾ ಶಿಕ್ಷೆಯನ್ನು ನೀಡಲಾಗುವುದು. ಈ ಉಪದೇಶಗಳೊಂದಿಗೆ ಮಾನವನನ್ನು ಸ್ವತಂತ್ರವಾಗಿ ಬಿಟ್ಟು ಬಿಡಲಾಗುತ್ತದೆ. ಯಾವುದೇ ಸೈನಿಕ, ಪೇದೆ ಅಥವಾ ನಿರಂತರ ಪರಿಚಾರಣೆಗಾಗಿ ಗೂಢಚರನನ್ನು ಅವನ ಹಿಂದೆ ನೇಮಿಸಲಾಗುವುದಿಲ್ಲ. ಹೆಚ್ಚೆಂದರೆ, ಇತರರ ಮುಂದೆ ಏನನ್ನೂ ತಿನ್ನಬಾರದು ಎನ್ನುವಷ್ಟರ ಮಟ್ಟಿಗೆ ಜನಾಭಿಪ್ರಾಯ ಅವನ ಮೇಲೆ ಒತ್ತಡ ಹೇರುತ್ತದೆ. ಆದರೆ ಜನರ ಕಣ್ತಪ್ಪಿಸಿ ಆಹಾರ ಸೇವನೆ ಮಾಡುವುದರಿಂದ ಅವನನ್ನು ತಡೆಯುವವರು ಯಾರೂ ಇಲ್ಲ. ಅವನು ಉಪವಾಸ ಆಚರಿಸಿರುವುದು ದೇವಸಂಪ್ರೀಯನ್ನು ಗಳಿಸಲಿಕ್ಕಾಗಿಯೋ ಅಥವಾ ಬೇರಾವುದೇ ಉದ್ದೇಶಕ್ಕಾಗಿಯೋ ಎಂದು ಪರಾಮರ್ಶೆ ನಡೆಸಲು ಜನಾಭಿಪ್ರಾಯಕ್ಕಾಗಲಿ ಯಾವುದೇ ಸರ್ಕಾರಕ್ಕಾಗಲಿ ಸಾಧ್ಯವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಉಪವಾಸವನ್ನು ಅದರೆಲ್ಲಾ ಶರ್ತಗಳೊಂದಿಗೆ ಪೂರ್ತೀಕರಿಸಿದರೆ ವ್ಯಕ್ತಿಯ ಮನಸ್ಸಿನಲ್ಲಿ ಎಂತಹ ಭಾವನೆ ಮೊಳೆಯುತ್ತದೆ ಎಂದು ಸ್ವಲ್ಪ ಆಲೋಚಿಸಿ ನೋಡಿ-

1) ಅವನಿಗೆ ದೇವನ ಅಸ್ತಿತ್ವದ ಬಗ್ಗೆ ವಿಶ್ವಾಸವಿರುತ್ತದೆ. ದೇವನು ಪರೋಕ್ಷಜ್ಞಾನಿ, ಸರ್ವಶಕ್ತ, ಅವನ ಮುಂದೆ ತಾನು ಅಧೀನ, ಅವನ ಮುಂದೆ ತನಗೆ ಉತ್ತರದಾಯಿತ್ವವಿದೆ ಎಂದು ಪೂರ್ಣ ವಿಶ್ವಾಸವಿರುತ್ತದೆ. ತಾನು ಉಪವಾಸದಿಂದಿರುವ ಅವಧಿಯುದ್ದಕ್ಕೂ ಅವನ ಈ ಭರವಸೆ ಕಿಂಚಿತ್ತೂ ವಿಚಲಿತವಾಗುವುದಿಲ್ಲ.

2) ಅವನಿಗೆ ಪರಲೋಕ, ಪಾರಮಾರ್ಥಿಕ ವಿಚಾರಣೆ ಮತ್ತದರ ಶಿಕ್ಷೆ- ರಕ್ಷೆಗಳ ಬಗ್ಗೆ ಸಂಪೂರ್ಣ ಭರವಸೆಯಿರುತ್ತದೆ. ತಾನು ಉಪವಾಸದ ಶರ್ತಗಳನ್ನು ಈಡೇರಿಸುತ್ತಿರುವ ಹನ್ನೆರಡು-ಹದಿನಾಲ್ಕು ಗಂಟೆಗಳ ಕಾಲ ಈ ವಿಶ್ವಾಸ ಅವನ ಮನದಲ್ಲಿ ನಿಚ್ಚಳವಾಗಿರುತ್ತದೆ.

3) ಅವನಲ್ಲಿ ಕರ್ತವ್ಯ ಪ್ರಜ್ಞೆಯಿದೆ. ಅವನು ತನ್ನ ಹೊಣೆಗಾರಿಕೆಗಳನ್ನು ಅರಿಯುತ್ತಾನೆ, ತನ್ನ ಸಂಕಲ್ಪವನ್ನು ಸ್ವತಃ ಪರಿಶೀಲಿಸುತ್ತಾನೆ, ತನ್ನ ಮನೋಸ್ಥಿತಿಯನ್ನು ಸ್ವತಃ ಪರಿಶೀಲಿಸುತ್ತಾನೆ. ಬಾಹ್ಯವಾಗಿ ನಿಯಮೋಲ್ಲಂಘನೆ ಅಥವಾ ಪಾಪಕೃತ್ಯ ಸಂಭವಿಸುವ ಮೊದಲು, ಮನಸ್ಸಿನಾಳದಲ್ಲಿ ಅದರ ಆಸಕ್ತಿ ಮೊಳೆಯುತ್ತಲೇ ಅವನು ತನ್ನ ಸಂಕಲ್ಪದಾರ್ಢ್ಯತೆಯಿಂದ ಅದನ್ನು ಕೊನೆಗೊಳಿಸಿ ಬಿಡುತ್ತಾನೆ. ಕಾನೂನು ಪಾಲನೆಗೆ ಯಾವುದೇ ಬಾಹ್ಯ ಒತ್ತಡ ಅವನಿಗೆ ಬೇಕಾಗಿಲ್ಲ ಎಂದು ಇದರಿಂದ ವೇದ್ಯವಾಗುತ್ತದೆ.

4) ಭೌತಿಕತೆ ಹಾಗೂ ಆಧ್ಯಾತ್ಮಿಕತೆ ಮತ್ತು ನೈತಿಕತೆಯ ಮಧ್ಯೆ ಆಯ್ಕೆಯ ಸ್ವಾತಂತ್ರ್ಯವನ್ನು ಅವನಿಗೆ ನೀಡಲಾದಾಗ ಅವನು ನೈತಿಕತೆ ಮತ್ತು ಆಧ್ಯಾತ್ಮಿಕತೆಯನ್ನೇ

ಆರಿಸಿಕೊಳ್ಳುತ್ತಾನೆ. ಪರಲೋಕ ಮತ್ತು ಇಹಲೋಕದಲ್ಲಿ ಆದ್ಯತೆ ಯಾವುದಕ್ಕೆ ಕೊಡಬೇಕೆಂಬ ಪ್ರಶ್ನೆ ಎದ್ದಾಗ ಅವನು ಸದಾ ಪರಲೋಕವನ್ನೇ ಆರಿಸುತ್ತಾನೆ. ನೈತಿಕ ಲಾಭಗಳಿಗಾಗಿ ಭೌತಿಕ ನಷ್ಟ ಮತ್ತು ಸಂಕಷ್ಟಗಳನ್ನು ನೆಚ್ಚಿಕೊಳ್ಳುವ ಹಾಗೂ ಪರಲೋಕದ ಲಾಭಕ್ಕಾಗಿ ಲೌಕಿಕ ನಷ್ಟವನ್ನು ಸ್ವೀಕರಿಸುವಷ್ಟು ಶಕ್ತಿ ಅವನಲ್ಲಿರುತ್ತದೆ.

5) ತನ್ನ ಸೌಕರ್ಯ, ಒಳ್ಳೆಯ ಋತು, ಸೂಕ್ತ ಸಮಯ, ಬಿಡುವಿನ ಅವಧಿ ಇತ್ಯಾದಿಗಳನ್ನೆಲ್ಲಾ ನೋಡಿ ಉಪವಾಸ ಆಚರಿಸಲು ತಾನು ಸ್ವತಂತ್ರನೆಂದು ಅವನು ಭಾವಿಸುವುದಿಲ್ಲ. ವಿಧ್ಯುಕ್ತವಾಗಿ ಯಾವ ಸಮಯವನ್ನು ಗೊತ್ತು ಪಡಿಸಲಾಗಿದೆಯೋ ಆ ಅವಧಿಯಲ್ಲೇ ಉಪವಾಸ ಆಚರಿಸಲು ತಾನು ವಿಧಿಸಲ್ಪಟ್ಟಿದ್ದೇನೆಂದು ಅವನು ಭಾವಿಸುತ್ತಾನೆ.. ಅದು ಎಂತಹ ಕಠಿಣ ಋತುವಾಗಿದ್ದರೂ, ಪರಿಸ್ಥಿತಿ ಎಷ್ಟು ಪ್ರತಿಕೂಲವಾಗಿದ್ದರೂ ವೈಯಕ್ತಿಕ ಹಿತಾಸಕ್ತಿಗಳ ಆಧಾರದಲ್ಲಿ ಉಪವಾಸ ಆಚರಿಸುವುದು ಎಷ್ಟು ವಿನಾಶಕಾರಕವಾಗಿದ್ದರೂ ಸರಿಯೇ.

6) ಅವನಲ್ಲಿ ತಾಳ್ಮೆ, ದೃಢಚಿತ್ತತೆ, ಸ್ಮರಣೆ, ಏಕಾಗ್ರತೆ, ವಿಶ್ವಾಸ ಹಾಗೂ ಲೌಕಿಕ ವ್ಯಾಮೋಹವನ್ನು ಮೆಟ್ಟಿ ನಿಲ್ಲುವಂತಹ ಶಕ್ತಿಯಿರುತ್ತದೆ. ಅದರ ಆಧಾರದಲ್ಲಿ ದೇವಸಂಪ್ರೀತಿಯನ್ನು ಗಳಿಸುವ ಉನ್ನತ ಉದ್ದೇಶಕ್ಕಾಗಿ, ಮರಣಾ ನಂತರದ ಜೀವನಕ್ಕೆ ಮುಂದುವರಿಸಲ್ಪಟ್ಟಿರುವ ಪ್ರತಿಫಲಗಳನ್ನು ನಿರೀಕ್ಷಿಸಿ ಕಾರ್ಯಸನ್ನದ್ಧನಾಗಲು ಅವನು ಹಿಂಜರಿಯುವುದಿಲ್ಲ. ಈ ಕೆಲಸಗಳ ಮಧ್ಯೆ ಅವನು ಸ್ವಯಂಪ್ರೇರಣೆಯಿಂದ ತನ್ನ ಸ್ವೇಚ್ಛೆಗಳನ್ನು ತಡೆದಿರಿಸುತ್ತಾನೆ. ಸುಡು ಬೇಸಿಗೆಯ ಸಮಯದಲ್ಲಿ ಬಾಯಾರಿಕೆಯಿಂದ ಗಂಟಲು ಒಣಗಿ ಹೋಗುತ್ತಿದೆ. ತಂಪು ಪಾನೀಯ ಅವನ ಮುಂದೆಯೇ ಇದೆ. ಸುಲಭವಾಗಿ ಅವನು ಅದನ್ನು ಸೇವಿಸಬಹುದು. ಆದರೆ ಅವನು ಕುಡಿಯುವುದಿಲ್ಲ. ಹಸಿವೆಯಿಂದ ಪ್ರಾಣವೇ ಹೋದಂತೆ ಭಾಸವಾಗುತ್ತಿದೆ. ಆಹಾರ ಅವರ ಮುಂದಿದೆ. ಬೇಕಿದ್ದರೆ ತಿನ್ನಬಹುದು. ಆದರೆ ಅವನು ತಿನ್ನುವುದಿಲ್ಲ. ಯುವ ದಂಪತಿಗಳ ಮನಸೇಚ್ಛೆ ಉದ್ದೀಪಿಸುತ್ತದೆ. ಬೇಕಿದ್ದರೆ ಯಾರಿಗೂ ತಿಳಿಯದಂತೆ ಮನೋಕಾಮನೆ ತೀರಿಸಬಹುದು. ಆದರೆ ಅವರು ಅದರಿಂದ ದೂರನಿಲ್ಲುತ್ತಾರೆ. ಗಳಿಸಬಹುದಾದ ಲಾಭಗಳನ್ನು ಅವರು ನಿರ್ಲಕ್ಷಿಸುತ್ತಾರೆ, ಸಂಭವಿಸಬಹುದಾದ ನಷ್ಟಗಳನ್ನು ನೆಚ್ಚಿಕೊಳ್ಳುತ್ತಾರೆ. ತಾವು ಆರಿಸಿದ ಸತ್ಯಪಥದಲ್ಲಿ ದೃಢ ಚಿತ್ತತೆಯಿಂದ ನೆಲೆನಿಲ್ಲುತ್ತಾರೆ. ಅದಕ್ಕೆ ಕಾರಣ ಈ ಲೋಕದಲ್ಲಿ ಗಳಿಸಬಹುದಾದ ಯಾವುದೇ ವಿಧದ ಲಾಭದ ಲಾಲಸೆಯಾಗಿರುವುದಿಲ್ಲ. ಪರಲೋಕಕ್ಕಿಂತ ಮೊದಲು ಯಾವುದೇ ಪ್ರತಿಫಲದ ನಿರೀಕ್ಷೆಯಿಡಬೇಕಾಗಿಲ್ಲ ಎಂದು ಮೊದಲೇ ಸಾರಲಾಗಿರುವ ಉದ್ದೇಶಕ್ಕಾಗಿ ಅವನು ಕಾರ್ಯತತ್ಪರನಾಗುತ್ತಾನೆ.

ಉಪವಾಸ ಆಚರಿಸುವ ತೀರ್ಮಾನ ತಳೆಯುತ್ತಲೇ ವ್ಯಕ್ತಿಯ ಮನಸ್ಸಿನಲ್ಲಿ ಮೊಳೆಯುವ ಭಾವನೆಗಳಿವು. ಅವನು ವಸ್ತುಶಃ ಉಪವಾಸ ಆಚರಿಸಿದಾಗ ಈ ಭಾವನೆಗಳು ಕಾರ್ಯತಃ ಒಂದು ಶಕ್ತಿಯಾಗಿ ರೂಪು ತಾಳುತ್ತವೆ. ಮೂವತ್ತು ದಿನಗಳ ತನಕ ಅವನು ನಿರಂತರ ಈ ಕಾರ್ಯ ಆವರ್ತನೆ ಮಾಡಿದಾಗ ಅವನಲ್ಲಿ ಈ ಶಕ್ತಿ ಲೀನವಾಗುತ್ತದೆ. ವ್ಯಕ್ತಿ ಪ್ರಾಪ್ತವಯಸ್ಕನಾಗುವುದರಿಂದ

ಹಿಡಿದು ಮರಣದ ತನಕ ಜೀವನ ಪರ್ಯಂತ ವರ್ಷಂಪ್ರತಿ ಒಂದು ತಿಂಗಳ ಉಪವಾಸ ಆಚರಿಸುವುದರಿಂದ ಈ ಗುಣಗಳು ಅವನ ಪ್ರವೃತ್ತಿಯಾಗಿ ಮಾರ್ಪಡುತ್ತವೆ. ಈ ಗುಣಗಳು ಉಪವಾಸ ಆಚರಣೆಗೆ ಸಹಾಯಕವಾಗಬೇಕು ಮತ್ತು ರಮಝಾನ್ ತಿಂಗಳಲ್ಲಿ ಉಪಯೋಗಕ್ಕೆ ಬರಬೇಕೆಂಬುದು ಇದರ ಉದ್ದೇಶವಲ್ಲ. ಈ ಗುಣಗಳಿಂದ ವ್ಯಕ್ತಿಯ ಸಚ್ಚಾರಿತ್ರ್ಯದ ಮೂಲತತ್ವ ರೂಪುಗೊಳ್ಳಬೇಕು, ಅವನು ಕೆಡುಕುಗಳಿಂದ ಸಂಪೂರ್ಣ ಮುಕ್ತನಾಗಬೇಕು, ಅವನ ಸಮಸ್ತ ಜೀವನ ದೇವಭಯದ ಮಾರ್ಗದಲ್ಲಿ ಮುನ್ನಡೆಯಬೇಕೆಂಬುದು ಇದರ ಉದ್ದೇಶವಾಗಿದೆ. ಇದಕ್ಕೆ ಉಪವಾಸಾಚರಣೆಗಿಂತ ಉತ್ತಮವಾದ ತರಬೇತಿ ವಿಧಾನ ಬೇರೆ ಇದೆಯೇ? ಇಸ್ಲಾಮೀ ಜೀವನ ಶೈಲಿಯನ್ನು ರೂಪಿಸಲು ಇದಕ್ಕೆ ಹೊರತಾದ ಬೇರೊಂದು ವಿಧಾನವನ್ನು ಸೂಚಿಸಲು ಯಾರಿಗಾದರೂ ಸಾಧ್ಯವೇ?

## ಆತ್ಮ ನಿಯಂತ್ರಣ

ಈ ತರಬೇತಿಯ ನಿಯಮಕ್ಕೆ ವ್ಯಕ್ತಿಯನ್ನು ಬದ್ಧಗೊಳಿಸಲು ಕೇವಲ ಎರಡು ಇಚ್ಛೆಗಳನ್ನು ಆರಿಸಲಾಗಿದೆ. ದೇಹೇಚ್ಛೆ ಮತ್ತು ಒಡಲೇಚ್ಛೆ. ಜತೆಗೆ ಮೂರನೇ ಇಚ್ಛೆಯೂ ಇದಕ್ಕೆ ಒಳಪಡುತ್ತದೆ, ವಿಶ್ರಾಮದ ಇಚ್ಛೆ. ತರಾವೀಹ್ ಪ್ರಾರ್ಥನೆ ಮತ್ತು ಉಷಃ ಪೂರ್ವ ಭೋಜನಕ್ಕಾಗಿ ರಾತ್ರಿಯ ಅಂತಿಮ ಯಾಮದಲ್ಲಿ ಸುಖ ನಿದ್ರೆಯನ್ನು ಭಂಗಗೊಳಿಸುವುದರಿಂದ ವಿಶ್ರಾಮ ಭಂಗವಾಗುತ್ತದೆ.

ಪ್ರಾಣಿ ಜೀವನದ ಅವಶ್ಯಕತೆಗಳ ಪೈಕಿ ಮೂರು ಅವಶ್ಯಕತೆಗಳು ಅತ್ಯಂತ ಮೂಲಭೂತ ಸ್ವರೂಪದ ಅವಶ್ಯಕತೆಗಳಾಗಿವೆ.

ಬದುಕಿರಲು ಆಹಾರದ ಅವಶ್ಯಕತೆ.

ಸಂತಾನ ವೃದ್ಧಿಗಾಗಿ ಅನ್ಯ ಲಿಂಗದೊಂದಿಗೆ ಸಂಸರ್ಗದ ಬಯಕೆ.

ಕಳೆದು ಹೋದ ಶಕ್ತಿಯನ್ನು ಪುನರ್‌ಗಳಿಸಲು ವಿಶ್ರಾಮದ ಬಯಕೆ.

ಈ ಮೂರು ಬಯಕೆಗಳು ಎಲ್ಲಾ ಪ್ರಾಣಿ ಸಹಜ ಬಯಕೆಗಳ ಬುನಾದಿ ಮತ್ತು ಎಲ್ಲಾ ಪ್ರಾಣಿ ಸಹಜ ಚಟುವಟಿಕೆಗಳ ಪ್ರೇರಕವಾಗಿದೆ. ಈ ಬಯಕೆಗಳು ಎಷ್ಟು ತೀವ್ರವಾದ ಬಯಕೆಗಳೆಂದರೆ ಮಾನವನು ಈ ಬೇಡಿಕೆಗಳಿಂದ ನಿರ್ಬಂಧಿತನಾಗಿಯೇ ಸರ್ವಸ್ವವನ್ನೂ ಮಾಡುತ್ತಾನೆ.

ಮಾನವನ ಸೇವೆ ಮತ್ತು ಉಪಯೋಗಕ್ಕಾಗಿ ಅವನ ವಶ ನೀಡಲಾಗಿರುವ ಅತ್ಯುತ್ತಮ ಸ್ವರೂಪದ ಪ್ರಾಣಿಯಾದ ಅವನ 'ದೇಹ'ದ ಮೂಲಭೂತ ಬಯಕೆಗಳೂ ಪೂರ್ವೋಕ್ತ ಬಯಕೆಗಳೇ ಆಗಿವೆ, ಅವನು ಎಲ್ಲಾ ಪ್ರಾಣಿಗಳಿಗಿಂತ ಉನ್ನತ ಹಂತದ ಪ್ರಾಣಿಯಾಗಿರುವುದರಿಂದ ಅವನ ಬಯಕೆಗಳೂ ಇತರ ಪ್ರಾಣಿಗಳಿಗಿಂತ ಹೆಚ್ಚಿದೆ. ಅವನಿಗೆ ಬದುಕಿರಲು ಆಹಾರ ಒದಗಿದರೆ ಮಾತ್ರ ಸಾಲದು, ಅತ್ಯುತ್ತಮ ರೀತಿಯ ಆಹಾರ ಬೇಕು. ವೈವಿಧ್ಯಮಯವಾದ ರುಚಿಕರ ಆಹಾರವನ್ನು ಅವನು ಬಯಸುತ್ತಾನೆ. ಆಹಾರ ಪದಾರ್ಥಗಳ ತಯಾರಿಕೆಯ ಬೇಡಿಕೆಯನ್ನು ಅವನು ಮುಂದಿಡುತ್ತಾನೆ. ಈ ಬೇಡಿಕೆಯೊಂದಿಗೆ ಎಷ್ಟು ಶಾಖೆಗಳು

ಮೊಳೆಯುತ್ತದೆಂದರೆ ಅದನ್ನು ಈಡೇರಿಸಲು ಒಂದು ಲೋಕವೇ ಬೇಕಾಗುತ್ತದೆ. ಸಂತಾನವೃದ್ಧಿಗಾಗಿ ಅನ್ಯಲಿಂಗದೊಂದಿಗೆ ಸಂಪರ್ಕವಷ್ಟೇ ಅವನ ಬೇಡಿಕೆಯಲ್ಲ. ಈ ಬೇಡಿಕೆಯೊಂದಿಗೆ ಅವನು ಸಾವಿರಾರು ಸೂಕ್ಷ್ಮಾತಿಸೂಕ್ಷ್ಮ ಅಂಶಗಳನ್ನು ಹುಟ್ಟು ಹಾಕುತ್ತಾನೆ. ಅದರಲ್ಲೂ ಅವನಿಗೆ ವೈವಿಧ್ಯತೆ, ಸೌಂದರ್ಯ ಮತ್ತು ಸುಖಲೋಲುಪತೆಯ ಸಹಸ್ರ ಸಾಧನಗಳು ಬೇಕು. ಸುಖಮಯವಾದ ಪರಿಸರ ಮತ್ತು ಸುಂದರವಾದ ವಾತಾವರಣವನ್ನು ಅವನು ಬಯಸುತ್ತಾನೆ. ಒಟ್ಟಿನಲ್ಲಿ ಇದರಲ್ಲೂ ಅವನ ಬೇಡಿಕೆಗಳು ಟಿಸಿಲೊಡೆದು ಎಲ್ಲೆಮೀರಿ ಬೆಳೆಯುತ್ತದೆ. ಹಾಗೆಯೇ ಇತರ ಪ್ರಾಣಿಗಳಂತೆ ವಿಶ್ರಾಮದಲ್ಲೂ ಕಳೆದು ಹೋದ ಶಕ್ತಿಯನ್ನು ತಂದುಕೊಳ್ಳುವುದಷ್ಟೇ ಅವನ ಇಂಗಿತವಾಗಿರುವುದಿಲ್ಲ. ಅದರಲ್ಲೂ ಕೊನೆಗೊಳ್ಳಲಾರದಷ್ಟು ರೆಂಬೆ-ಕೊಂಬೆಗಳು ಹುಟ್ಟಿಕೊಳ್ಳುತ್ತವೆ. ಕಳೆದುಹೋದ ಶಕ್ತಿಯನ್ನು ತಂದುಕೊಳ್ಳುವ ಬದಲು ಶಕ್ತಿಯೇ ಪೋಲಾಗದಿರುವ ಉಪಾಯ ಹುಡುಕುತ್ತಾನೆ, ಶ್ರಮವಿಲ್ಲದೆ ಕೆಲಸ ಸಾಧಿಸಲು ಪ್ರಯತ್ನಿಸುತ್ತಾನೆ, ಯಾವುದೇ ಶ್ರಮವಿಲ್ಲದೆ ಅಥವಾ ಕನಿಷ್ಟ ಶ್ರಮದಿಂದ ಉದ್ದೇಶ ಸಾಧಿಸುವ ಮಾರ್ಗೋಪಾಯಗಳನ್ನು ಅವನು ಕಂಡು ಹುಡುಕುತ್ತಾನೆ. ತನ್ನ ಪ್ರಾಣಿ ಸಹಜ ಬೇಡಿಕೆಗಳಿಗೆ ಹೊರತಾದ ಬೇರೆ ಉದ್ದೇಶಗಳಿಗಾಗಿ ಪರಿಶ್ರಮಿಸುವಾಗ ಅವನಿಗೆ ಪ್ರಾಣಾಂತಿಕ ಯಾತನೆಯಾಗುತ್ತದೆ.

ಹೀಗೆ ಈ ಮೂರು ಮೂಲಭೂತ ಬೇಡಿಕೆಗಳ ಮೂಲಕ ಬೇಡಿಕೆಗಳ ಅಭೇದ್ಯ ಜಾಲವೇ ನಿರ್ಮಾಣವಾಗುತ್ತದೆ. ಅದು ಸಮಸ್ತ ಜೀವನವನ್ನು ಆವರಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಮಾನವನ ಸೇವಕನಾದ ದೇಹವೆಂಬ ಈ ಪ್ರಬಲ ಪ್ರಾಣಿಯ ಬಳಿ ಇರುವುದು ಶಕ್ತಿಯುತವಾದ ಈ ಮೂರು ಆಯುಧಗಳಾಗಿವೆ. ಅದರ ಶಕ್ತಿಯ ಮೂಲಕ ಅದು ಮಾನವನ ಅಧೀನವಾಗಿರುವ ಬದಲು ಸ್ವತಃ ಮಾನವನನ್ನೇ ಮಣಿಸಲು ಪ್ರಯತ್ನಿಸುತ್ತದೆ. ಅದರ ಮತ್ತು ಮಾನವನ ನಡುವಿನ ಸಂಬಂಧ ನೈಸರ್ಗಿಕ ಸಂಬಂಧಕ್ಕೆ ಭಿನ್ನವಾಗಲು ಅದು ಒತ್ತಡ ಹೇರುತ್ತದೆ. ಮಾನವ ಅದನ್ನು ನಿಯಂತ್ರಿಸುವ ಬದಲು ಅದು ಮಾನವನನ್ನು ಅತಿಜಯಿಸಿ ತನ್ನಿಚ್ಛೆಯೆಡೆಗೆ ಅವನನ್ನು ಸೆಳೆಯಲು ಪ್ರಯತ್ನಿಸುತ್ತದೆ. ಮಾನವ ಅತ್ಯಂತ ಪ್ರಬಲವಾಗಿ ಅದರ ಮೇಲೆ ಹಿಡಿತ ಸಾಧಿಸದಿದ್ದರೆ ಮತ್ತು ವಿವೇಚನೆ ಹಾಗೂ ಸಂಕಲ್ಪದ ಹಗ್ಗವನ್ನು ಸಡಿಲ ಬಿಟ್ಟರೆ ಅದು ಮಾನವನನ್ನು ಅತಿಜಯಿಸುತ್ತದೆ. ಅನಂತರ ಮಾನವನು ಅವನ ಸೇವಕನ ದಾಸನಾಗಿ, ಮಾರ್ಪಡುತ್ತಾನೆ ಮತ್ತು ಸೇವಕನು ಅವನ ಒಡೆಯನೆನಿಸಿಕೊಳ್ಳುತ್ತಾನೆ. ಮಾನವನಿಗೆ ದಯಪಾಲಿಸಲಾಗಿರುವ ಹೆಸರಿನ ಆಧಾರದಲ್ಲಿ ವಸ್ತುಗಳನ್ನು ಗುರುತಿಸುವ ಜ್ಞಾನ ಮತ್ತು ಚಿಂತನ- ಮಂಥನ, ಪ್ರಭಾವಶೀಲತೆ, ಸಂಶೋಧನೆ ಇತ್ಯಾದಿ ಪ್ರತಿಭೆಗಳೆಲ್ಲವೂ ಆ ಕುರುಡು ಮತ್ತು ಅಜ್ಞಾನಿ ಪ್ರಾಣಿಯ ಸೇವೆಗೆ ಸೀಮಿತವಾಗಿ ಬಿಡುತ್ತದೆ. ಈ ಪ್ರತಿಭೆಗಳ ಆಧಾರದಲ್ಲಿ ಉನ್ನತಿಗೇರುವ ಬದಲು ಅವನು ಪತನಕ್ಕಿಳಿಯಲು ಆರಂಭಿಸುತ್ತಾನೆ. ಉನ್ನತ ಮಾನವೀಯ ಉದ್ದೇಶಗಳನ್ನು ಸಾಧಿಸುವ ಬದಲು ನಿಕೃಷ್ಟ ಪಾಶವೀಯ ಉದ್ದೇಶಗಳನ್ನು ಸಾಧಿಸಲು ಮಾತ್ರವೇ ಅವನು ಆ ಪ್ರತಿಭೆಗಳನ್ನು ಉಪಯೋಗಿಸುತ್ತಾನೆ. ಆಹೋರಾತ್ರಿ ಈ ಪ್ರಾಣಿಯ ತೀಟೆ ತೀರಿಸಲು ಹೊಸ ಹೊಸ ಸಾಧನಗಳನ್ನು ಕಂಡು ಹುಡುಕುವುದಷ್ಟೇ ಈ ಪ್ರತಿಭೆಗಳ

ಉಪಯೋಗವಾಗಿ ಬಿಡುತ್ತದೆ. ಪರಿಣಾಮವಾಗಿ ಅದು ಅತ್ಯಂತ ನಿಕೃಷ್ಟ ಸ್ವರೂಪದ ಪ್ರಾಣಿಯಾಗಿ ಮಾರ್ಪಡುತ್ತದೆ. ಯಾವುದೇ ಪ್ರಾಣಿಗೆ ತನ್ನ ಸ್ವೇಚ್ಛೆಗಳ ಈಡೇರಿಕೆಗೆ ಮಾನವನಂತಹ ಸೇವಕ ದೊರೆತರೆ ಅನಂತರ ಅದು ತಲುಪಬಹುದಾದ ಕೆಡುಕಿಗೆ ಪಾರವಿದೆಯೇ? ಎತ್ತಿಗೆ ಜಲಸೇನೆಯನ್ನು ತಯಾರಿಸುವಂತಹ ಅರ್ಹತೆ ದೊರೆತರೆ ಭೂಮಿಯ ಯಾವ ಹುಲ್ಲುಗಾವಲಿಗೆ ಅದರ ಆರ್ಥಿಕ ಹಿತಾಸಕ್ತಿಯಿಂದ ಮುಕ್ತಿಹೊಂದಲು ಸಾಧ್ಯ. ನಾಯಿಯ ಅತಿಯಾಸೆಗೆ ಟ್ಯಾಂಕು ಮತ್ತು ವಿಮಾನಗಳನ್ನು ತಯಾರಿಸುವಂತಹ ಶಕ್ತಿ ಪ್ರಾಪ್ತವಾದರೆ ಯಾವ ಮಾಂಸದ ತುಂಡು ಮತ್ತು ಮೂಳೆಗಳಿಗೆ ಅದರ ಕೋರೆಹಲ್ಲುಗಳ ದುಷ್ಟ ಹಿಡಿತದಿಂದ ಮುಕ್ತಿ ಹೊಂದಲು ಸಾಧ್ಯ? ತೋಳಕ್ಕೆ ತನ್ನ ಕಾಡಿನ ತೋಳಗಳ ಕೂಟವನ್ನು ರಚಿಸಲು ಗೊತ್ತಿದ್ದರೆ ಮತ್ತು ಈ ಉದ್ದೇಶ ಸಾಧನೆಗೆ ಅದು ಪತ್ರಿಕೆ, ಪ್ರಚಾರಗಳಿಂದ ಹಿಡಿದು ದೂರಗಾಮಿ ತೋಪುಗಳ ಉಪಯೋಗವನ್ನೂ ಮಾಡಬಲ್ಲುದಾದರೆ ಭೂಮಿಗೆ ಅದರ ಒಡಲ ಕಿಚ್ಚನ್ನು ಇಂಗಿಸಲು ಸಾಧ್ಯವೇ? ಆಡಿನ ಲೈಂಗಿಕಾಸಕ್ತಿಗೆ ಕಾದಂಬರಿ, ನಾಟಕ, ಚಿತ್ರಕಲೆ, ಸಂಗೀತ, ನೃತ್ಯ, ನಟನೆ, ಸೌಂದರ್ಯವರ್ಧಕ ಸಾಧನಗಳು ಮಾತ್ರವಲ್ಲ, ಕಾಲೇಜು, ಕ್ಲಬ್ ಮತ್ತು ಚಲನಚಿತ್ರರಂಗಗಳನ್ನು ಸಜ್ಜುಗೊಳಿಸುವಂತಹ ಅರ್ಹತೆಯಿದ್ದರೆ ಅದರ ಭೋಗವಿಲಾಸಗಳಿಗೆ ಕಡಿವಾಣ ಹಾಕಲು ಯಾರಿಗೆ ಸಾಧ್ಯ?

ಮಾನವನನ್ನು ಈ ಪತನಕ್ಕೆ ಈಡಾಗುವುದರಿಂದ ರಕ್ಷಿಸಬೇಕಾದರೆ ಮಾನವನ ಜೀವನದ ನೈಜ ಉದ್ದೇಶವನ್ನು ಅವನ ಮುಂದಿಡಬೇಕು. ಮಾನವೀಯ ಪ್ರತಿಭೆಗಳ ಸರಿಯಾದ ವಿನಿಯೋಗ ಅವನಿಗೆ ವ್ಯಕ್ತವಾಗಬೇಕು. ಅದೆಲ್ಲದರ ಜತೆಗೆ ದೇಹವೆಂಬ ಪ್ರಾಣಿಯ ಜತೆ ಇರುವ ಸ್ವಾಭಾವಿಕ ಸಂಬಂಧ ವಸ್ತುಶಃ ಸ್ಥಾಪಿಸಲ್ಪಡಬೇಕು. ಅದರ ಮೇಲೆ ಸವಾರಿ ನಡೆಸುವ ವ್ಯಕ್ತಿಯನ್ನು ಯೋಗಾಭ್ಯಾಸಗಳ ಮೂಲಕ ಚುರುಕುಗೊಳಿಸಬೇಕು. ಅವನು ತನ್ನ ಸಂಕಲ್ಪದ ಹಗ್ಗವನ್ನು ಭದ್ರವಾಗಿ ಹಿಡಿದು ತನ್ನ ಸವಾರಿಯ ಮೇಲೆ ಸ್ಥಿರವಾಗಿ ಕುಳಿತುಕೊಳ್ಳುವಂತಾಗಬೇಕು. ಅದರ ಮೇಲೆ ಅವನು ಎಷ್ಟು ಹಿಡಿತ ಸಾಧಿಸ ಬೇಕೆಂದರೆ, ಸ್ವೇಚ್ಛೆಗಳನ್ನು ಹಿಂಬಾಲಿಸುವ ಬದಲು, ತನ್ನಿಚ್ಛೆಯಂತೆ ಅದನ್ನು ನೇರಮಾರ್ಗದಲ್ಲಿ ನಿರಂತರ ಮುನ್ನಡೆಸಬೇಕು. ದೇಹವೆಂಬ ಪ್ರಾಣಿಯನ್ನು, ಅದರಿಂದ ಕಾರ್ಯಸಾಧಿಸಲು ಮತ್ತು ಅದನ್ನು ಉದ್ದೇಶ ಸಾಧನೆಯ ಮಾಧ್ಯಮವನ್ನಾಗಿ ಮಾಡಲು, ದೇವನು ನಮ್ಮ ಅಧೀನಗೊಳಿಸಿದ್ದಾನೆ. ದೇಹದಲ್ಲಿರುವ ಮೆದುಳು ವ್ಯಕ್ತಿಯ ಚಿಂತನೆಯ ಆಕರವಾಗಿದೆ. ಪಂಚೇಂದ್ರಿಯಗಳು ಜ್ಞಾನಾರ್ಜನೆಯ ಮೂಲಗಳಾಗಿವೆ. ಅವನ ಕೈಕಾಲುಗಳು ಪ್ರಯತ್ನ ಪರಿಶ್ರಮಗಳ ಅಸ್ತ್ರಗಳಾಗಿದೆ. ಅಲ್ಲಾಹನು ಈ ಲೋಕದಲ್ಲಿ ಮಾನವನ ವಶ ಒಪ್ಪಿಸಿರುವ ಸಾಧನಗಳ ಪೈಕಿ ದೇಹವೆಂಬುದು ಅತ್ಯುಪಯುಕ್ತ ಸಾಧನವಾಗಿದೆ. ಈ ದೇಹದಲ್ಲಿ ಸುಪ್ತವಾಗಿರುವ ಸ್ವಾಭಾವಿಕ ಕಾಮನೆಗಳೆಲ್ಲವೂ ಅದರ ನೈಜ ಅವಶ್ಯಕತೆಗಳೇ ಆಗಿವೆ. ಈ ಅವಶ್ಯಕತೆಗಳ ಈಡೇರಿಕೆ ನಮ್ಮ ಕರ್ತವ್ಯವಾಗಿದೆ. ದೇಹವನ್ನು ಆರಾಮದಾಗಿಡುವುದು, ಅದಕ್ಕೆ ಪುಷ್ಟಿಕರ ಆಹಾರವೊದಗಿಸುವುದು, ಸಂತಾನಾಭಿವೃದ್ಧಿಗಾಗಿ ಅದರ ಬಯಕೆಯನ್ನು ಈಡೇರಿಸುವುದು, ಅದನ್ನು ವ್ಯರ್ಥಗೊಳಿಸದಿರುವುದು ಮುಂತಾದವುಗಳೆಲ್ಲವೂ ನಮಗೆ ಅದರ ಮೇಲಿರುವ ಕರ್ತವ್ಯಗಳಾಗಿವೆ. ಆದರೆ ಇವುಗಳೆಲ್ಲವೂ

ನಮ್ಮ ಮತ್ತು ನಮ್ಮ ಜೀವಿತೋದ್ದೇಶದ ಸೇವೆಗೆ ಇರುವ ಸಾಧನಗಳಾಗಿವೆ. ಬದಲಾಗಿ ನಮ್ಮ ಅಸ್ತಿತ್ವವಿರುವುದು ಅದರ ಮತ್ತು ಅವರ ಜೀವಿತೋದ್ದೇಶದ ಪಾಲನೆಗಲ್ಲ. ಅದು ನಮ್ಮ ಸಂಕಲ್ಪಕ್ಕೆ ಅಧೀನವಾಗಿರಬೇಕೇ ಹೊರತು, ನಾವು ಅದರ ಲಾಲಸೆಗಳ ದಾಸರಾಗಬಾರದು. ಅಧಿಕಾರಾರೂಢನಾಗಿ ಅದರ ಬಯಕೆಗಳನ್ನು ನಮ್ಮಿಂದ ಪೂರ್ತೀಕರಿಸಿಕೊಳ್ಳುವ ಸ್ಥಾನ ಅದಕ್ಕಿಲ್ಲ. ದಾಸನಂತೆ ತನ್ನ ಬಯಕೆಗಳೇನೆಂದು ನಮ್ಮೊಡನೆ ಭಿನ್ನವಿಸಿಕೊಳ್ಳುವುದೇ ಅದಕ್ಕಿರುವ ಸ್ವೈಜ ಸ್ಥಾನವಾಗಿದೆ. ಅದರ ಅರಿಕೆಗಳನ್ನು ಅವಶ್ಯ ಬಂದಾಗ ಸೂಕ್ತ ರೀತಿಯಲ್ಲಿ ಈಡೇರಿಸುವುದು ನಮ್ಮ ಪರಿಣತ ಮತ್ತು ವಿವೇಚನಾ ಪ್ರಜ್ಞೆಯುಳ್ಳ ವ್ಯಕ್ತಿತ್ವದ ಕೆಲಸವಾಗಿದೆ.

ಉಪವಾಸದ ಉದ್ದೇಶಗಳ ಪೈಕಿ ಅತ್ಯಂತ ಮಹತ್ತರವಾದ ಉದ್ದೇಶ ಮಾನವನಿಗೆ ಅವನ ಮೃಗೀಯ ಅಸ್ತಿತ್ವದ ಮೇಲೆ ಇಂತಹ ಅಧಿಕಾರವನ್ನು ಪ್ರಾಪ್ತಗೊಳಿಸುವುದಾಗಿದೆ. ಎಲ್ಲಾ ಮೃಗೀಯ ಕಾಮನೆಗಳ ಮೂಲವಾದ ಮತ್ತು ನಮ್ಮನ್ನು ತನ್ನ ದಾಸ್ಯಕ್ಕೊಳಪಡಿಸಲು ಉಪಯೋಗಿಸಲ್ಪಡುವ ಶರೀರದ ಪ್ರಬಲ ಮೂರು ಕಾಮನೆಗಳನ್ನು ಉಪವಾಸ ನಿಯಂತ್ರಿಸುತ್ತದೆ. ಈ ಲಾಲಸೆಗಳ ಮೂತಿಗೆ ಅದು ಪ್ರಬಲ ಕಡಿವಾಣವನ್ನು ಹಾಕುತ್ತದೆ ಮತ್ತು ಅದರ ಹಗ್ಗವನ್ನು ನಮ್ಮ ವ್ಯಕ್ತಿತ್ವದ ಕೈಗೊಪ್ಪಿಸುತ್ತದೆ. ನಮ್ಮ ವ್ಯಕ್ತಿತ್ವ ದೇವನ ಮೇಲೆ ವಿಶ್ವಾಸವಿರಿಸಿದ ಮತ್ತು ಅವನು ತೋರಿಸಿದ ಮಾರ್ಗದಲ್ಲಿ ನಡೆಯುವ ಸಂಕಲ್ಪ ತಳೆದ ವ್ಯಕ್ತಿತ್ವವಾಗಿದ್ದರೆ, ದೇಹವೆಂಬ ಪ್ರಾಣಿಯ ನಿರ್ಬಂಧಿತಾವಸ್ಥೆ ಹೇಳತೀರದು. ಬೆಳಗ್ಗಿನಿಂದ ಸಂಜೆಯ ತನಕ ಅದು ಅನ್ನ-ಪಾನೀಯಗಳನ್ನು ಬಯಸುತ್ತಿರುತ್ತದೆ, ಆದರೆ ನಾವದಕ್ಕೆ ಏನನ್ನೂ ನೀಡುವುದಿಲ್ಲ. ಅದು ನೀರಿನೆಡೆಗೆ ಧುಮುಕ ಬಯಸುತ್ತದೆ ಆದರೆ ನಾವದರ ಮೂಗುದಾರವನ್ನು ಹಿಡಿದೆಳೆಯುತ್ತೇವೆ. ಅನ್ನವನ್ನು ನೋಡಿದಾಗ ಅದು ಬಾಯಿ ಚಪ್ಪರಿಸುತ್ತದೆ, ಆದರೆ ನಾವದನ್ನು ಅಲುಗಾಡಲಿಕ್ಕೂ ಬಿಡುವುದಿಲ್ಲ. ಯಾವುದಾದರೊಂದು ಒಳ್ಳೆಯ ಸಿಗರೇಟು, ಚುಟ್ಟ ಅಥವಾ ಎಲೆ ಅಡಿಕೆಯ ಮೂಲಕ ನನ್ನ ಒಡಲಕಿಚ್ಚನ್ನು ತೀರಿಸಿ ಎಂದು ಅದು ಬಿನ್ನವಿಸಿಕೊಳ್ಳುತ್ತದೆ.ಆದರೆ ನಾವದರ ವಿನಂತಿಯನ್ನು ತಳ್ಳಿಬಿಡುತ್ತೇವೆ. ತನ್ನ ಎಣೆಯನ್ನು ಕಂಡು ಅದು ಅದರತ್ತ ಹಾರುತ್ತದೆ. ಆದರೆ ತೀಟೆ ತೀರಿಸುವ ಪ್ರಶ್ನೆ ಬಂದಾಗ ನಾವು ಲಗಾಮು ಬಿಗಿಯುತ್ತೇವೆ. ಹೀಗೆ ದಿನವಿಡೀ ಅದರ ಬಯಕೆಗಳನ್ನು ಧಿಕ್ಕರಿಸಿದ ನಂತರ ನಮ್ಮ ಪ್ರಭು ನಿಶ್ಚಯಿಸಿದ ಸಮಯ ಬಂದಾಗ ನಾವದಕ್ಕೆ ಅನ್ನ-ನೀರು ದಯಪಾಲಿಸುತ್ತೇವೆ. ಇನ್ನು ದಣಿದ ದೇಹ ಸ್ವಲ್ಪ ವಿಶ್ರಮಿಸಬೇಕೆನ್ನುತ್ತದೆ. ಆದರೆ 'ಇಶಾ ಅದಾನ್' ಕೇಳುತ್ತಲೇ ನಾವದನ್ನು ಕಿವಿ ಹಿಡಿದು ನಿಲ್ಲಿಸುತ್ತೇವೆ ಮತ್ತು ಮಸೀದಿಯೆಡೆಗೆ ಎಳೆದೊಯ್ಯುತ್ತೇವೆ. ಬೇರೆ ದಿನಗಳಲ್ಲಿ 'ಇಶಾ' ಪ್ರಾರ್ಥನೆಗಾಗಿ ಸ್ವಲ್ಪ ಹೊತ್ತು ನಿಂತರೆ ಸಾಕಾಗುತ್ತಿತ್ತು. ರಮಝಾನಿನಲ್ಲಿ ಸಾಮಾನ್ಯ ನಮಾಝ್‌ಗಳಲ್ಲದೆ ತರಾವೀಹ್ ನಮಾಝಿನ ಹೆಚ್ಚುವರಿ ರಕಅತ್‌ಗಳನ್ನು ನಿರ್ವಹಿಸಲು ನಾವದನ್ನು ನಿಲ್ಲುವಂತೆ ಮಾಡುತ್ತೇವೆ. ಈ ಜಂಜಡದಿಂದ ಹೊರಬಂದು ಬಡ ದೇಹ ನಿದ್ರೆಯೆಡೆಗೆ ಧಾವಿಸುತ್ತದೆ. ಬೆಳಗಾತದ ತನಕ ಸುಖ ನಿದ್ರೆ ಮಾಡಬೇಕೆಂದು ಅದು ಬಯಸುತ್ತದೆ. ಆದರೆ ರಾತ್ರಿಯ ಅಂತಿಮ ಯಾಮದಲ್ಲಿ ದೇಹದ ಕಣಕಣವೂ ಸುಖನಿದ್ರೆಯಲ್ಲಿ ಮೈಮರೆತಿರುವಾಗ ನಾವದನ್ನು ಬಡಿದೆಬ್ಬಿಸುತ್ತೇವೆ. ಆಗ ಅದರ ಮಂಪರು ಇಳಿದು ಬಿಡುತ್ತದೆ.

ಅನಂತರ, ಹಗಲಿನಲ್ಲಿ ಆಹಾರವನ್ನು ಸೇವಿಸುವ ಬದಲು ಈ ಹೊತ್ತಿನಲ್ಲಿ ತಿನ್ನಬೇಕೆಂಬುದು ನಮ್ಮ ಪ್ರಭುವಿನ ಆಜ್ಞೆಯಾಗಿರುವುದರಿಂದ, ಏನಾದರೂ ತಿನ್ನಲಿಕ್ಕಿದ್ದರೆ ಈಗ ತಿನ್ನು ಎಂದು ನಾವು ಅದಕ್ಕೆ ಆಜ್ಞಾಪಿಸುತ್ತೇವೆ.

ಪ್ರತಿ ವರ್ಷ ಒಂದು ತಿಂಗಳ ಅವಧಿಯಲ್ಲಿ ಈ ಅಭ್ಯಾಸವನ್ನು ನಮಗೆ ಮಾಡಿಸಲಾಗುತ್ತದೆ. ದೇಹವೆಂಬ ದಾಸನ ಮೇಲೆ ನಮಗೆ ಪೂರ್ಣ ಅಧಿಕಾರ ಪ್ರಾಪ್ತವಾಗಬೇಕೆಂಬುದೇ ಇದರ ಉದ್ದೇಶ. ಈ ಮೂಲಕ ನಾವು ನಮ್ಮ ದೇಹ ಮತ್ತು ದೈಹಿಕ ಶಕ್ತಿಗಳ ಮೇಲೆ ಅಧಿಕಾರವುಳ್ಳ ಒಡೆಯರಾಗಿ ಮಾರ್ಪಡುತ್ತೇವೆ. ಮೃಗೀಯ ಆಸಕ್ತಿಗಳ ಪ್ರಬಲ ಒತ್ತಾಸೆ ಕೊನೆಗೊಳ್ಳುತ್ತದೆ. ನಮ್ಮ ಯಾವುದೇ ಆಸೆಗಳನ್ನು ಯಾವ ಹಂತದಲ್ಲಿ ಬೇಕಾದರೂ ತಡೆದು ನಿಲ್ಲಿಸುವಂತಹ ಶಕ್ತಿ ನಮ್ಮಲ್ಲಿ ಬೆಳೆಯುತ್ತದೆ. ಅದೇ ರೀತಿ ಯಾವುದೇ ದೈಹಿಕ ಶಕ್ತಿಗಳಿಂದ ಯಾವ ತೆರನಾದ ಪ್ರಯೋಜನವನ್ನು ಬೇಕಾದರೂ ಪಡೆಯುವ ಅರ್ಹತೆ ನಮ್ಮಲ್ಲಿ ಬೆಳೆಯುತ್ತದೆ.

ವ್ಯಕ್ತಿಗೆ ತನ್ನ ಆಸೆಗಳನ್ನು ಎದುರಿಸುವ ಅಭ್ಯಾಸವೇ ಇಲ್ಲಿದಿದ್ದರೆ, ಮನಸ್ಸಿನ ಪ್ರತಿಯೊಂದು ಬಯಕೆಗಳನ್ನು ಚಾಚೂ ತಪ್ಪದೆ ಪಾಲಿಸುವ ಪರಿಪಾಠ ಅವನದಾದರೆ, ಮೃಗೀಯ ಪ್ರಕೃತಿಯ ಪ್ರತಿಯೊಂದು ಪ್ರೇರಣೆಯನ್ನು ಪಾಲನಾರ್ಹ ಅಪ್ಪಣೆಯೆಂದು ಭಾವಿಸುವುದು ಅವನ ಹವ್ಯಾಸವಾದರೆ, ಅವನಿಗೆ ಲೋಕದಲ್ಲಿ ಯಾವುದೇ ಮಹತ್ಕಾರ್ಯವನ್ನು ಮಾಡಲು ಸಾಧ್ಯವಿಲ್ಲ. ಮಹತ್ಕಾರ್ಯವೆಸಗಲು ವ್ಯಕ್ತಿಯಲ್ಲಿ ಅವನ ಮನಸೇಚ್ಛೆಗಳನ್ನು ನಿಯಂತ್ರಿಸುವ ಮತ್ತು ಅಲ್ಲಾಹನು ಅವನ ಆತ್ಮ ಮತ್ತು ದೇಹದಲ್ಲಿ ಸುಪ್ತಗೊಳಿಸಿರುವ ಶಕ್ತಿಗಳನ್ನು ತನ್ನಿಚ್ಛೆಯಂತೆ ಉಪಯೋಗಿಸುವ ಶಕ್ತಿಯನ್ನು ಹೊಂದಿರಬೇಕು. ಆದ್ದರಿಂದಲೇ ರಮಝಾನಿನ ಕಡ್ಡಾಯ ಉಪವಾಸಗಳಲ್ಲದೆ ವರ್ಷದ ಮಧ್ಯೆ ಕೆಲವೊಮ್ಮೆ ಐಚ್ಛಿಕ ಉಪವಾಸ ವ್ರತಗಳನ್ನು ಆಚರಿಸುವುದನ್ನೂ ಗೊತ್ತುಪಡಿಸಲಾಗಿದೆ. ವ್ಯಕ್ತಿಗೆ ತನ್ನ ಸ್ವೇಚ್ಛೆಗಳ ಮೇಲಿನ ಅಧಿಕಾರ ಸುಭದ್ರವಾಗಬೇಕೆಂಬುದೇ ಇದರ ಉದ್ದೇಶ.

ಇಸ್ಲಾಮಿನ ಉಪವಾಸ ವ್ರತ ವ್ಯಕ್ತಿಗೆ ತನ್ನ ಆತ್ಮ ಮತ್ತು ದೇಹದ ಮೇಲೆ ದೊರಕಿಸಿಕೊಡುವ ಅಧಿಕಾರಕ್ಕೂ ಇಸ್ಲಾಮೇತರ ಆತ್ಮನಿಗ್ರಹ ಮತ್ತು ಸಂಕಲ್ಪ ದಾರ್ಢ್ಯತೆ ಬೆಳೆಸುವ ಅಭ್ಯಾಸಗಳ ಮೂಲಕ ಪ್ರಾಪ್ತವಾಗುವ ಅಧಿಕಾರಕ್ಕೂ ದೊಡ್ಡ ವ್ಯತ್ಯಾಸವಿದೆ. ಅದು ಅತ್ಯಂತ ಮೌಲಿಕ ಮತ್ತು ತಾತ್ವಿಕವಾದ ವ್ಯತ್ಯಾಸವಾಗಿದೆ. ಅಂತೆಯೇ ಮಹಾನ್ ವ್ಯಕ್ತಿಗಳಲ್ಲಿ ಅಡಕವಾಗಿರುವ ಆತ್ಮದ ಮೇಲಿನ ನಿಯಂತ್ರಣಾಧಿಕಾರ ಇದಕ್ಕಿಂತ ಭಿನ್ನವಾಗಿದೆ. ಇಸ್ಲಾಮೇತರವಾದ ಈ ಅಧಿಕಾರ ನಿಜವಾಗಿ ಅಜ್ಞ ಮತ್ತು ನಿರಂಕುಶವಾದ ಮನಸ್ಸಿನ, ಹಾಗೂ ತನ್ನ ಮೇಲಿನ ಯಾವುದೇ ಆಜ್ಞಾಧಿಕಾರಿಯ ಪಾಲನೆಯನ್ನಾಗಲಿ, ಯಾವುದೇ ಕಾನೂನಿನ ಅನುಸರಣೆಯನ್ನಾಗಲಿ ಅಥವಾ ಯಾವುದೇ ಜ್ಞಾನದ ಪಾಲನೆಯನ್ನಾಗಲಿ ಮಾಡದ ಸ್ವೇಚ್ಛೆಯ ನಿಶ್ಶರ್ಥ ಅನುಸರಣೆಯಾಗಿದೆ, ಅದಕ್ಕೆ ದೈಹಿಕ ಮತ್ತು ಮಾನಸಿಕ ಶಕ್ತಿಗಳ ಮೇಲೆ ಇರುವ ಅಧಿಕಾರವನ್ನು ಅದು ನೈಜ ಉದ್ದೇಶ ಮತ್ತು ಸರಿಯಾದ ವಿಧಾನದಲ್ಲಿ ಉಪಯೋಗಿಸಬೇಕಾಗಿಲ್ಲ. ಮಾತ್ರವಲ್ಲ ಉಪಯೋಗಿಸುವ ಸಾಧ್ಯತೆಯೂ ಇಲ್ಲ. ಲೋಕದಲ್ಲಿ ಸನ್ಯಾಸ, ವೈರಾಗ್ಯ ಮತ್ತು

ಲೋಕವಿರಕ್ತಿಯ ರೋಗಗಳೆಲ್ಲವೂ ಇಂತಹ ಅಧಿಕಾರದಿಂದಲೇ ಹುಟ್ಟಿಕೊಳ್ಳುತ್ತವೆ. ಇಂತಹ ಅಧಿಕಾರದಿಂದಾಗಿಯೇ ದೇಹ ಮತ್ತು ಮನಸ್ಸಿನ ಅತ್ಯಂತ ನ್ಯಾಯೋಚಿತ ಹಕ್ಕುಗಳೂ ಕಸಿಯಲ್ಪಟ್ಟಿವೆ. ಈ ಅಧಿಕಾರದ ಆಧಾರದಲ್ಲೇ ವ್ಯಕ್ತಿ ತನ್ನ ನಿಸರ್ಗದೊಂದಿಗೆ ಸಂಘರ್ಷಿಸುತ್ತಾನೆ. ಈ ಅಧಿಕಾರದಿಂದಾಗಿಯೇ ವ್ಯಕ್ತಿ ತನ್ನ ಪ್ರತಿಭೆಗಳನ್ನು ನಾಗರಿಕತೆ ಮತ್ತು ಸಂಸ್ಕೃತಿಯ ಉತ್ಥಾನಕ್ಕೆ ವ್ಯಯಿಸುವ ಬದಲು ಅದರ ಅವನತಿ ಮತ್ತು ಪತನಕ್ಕೆ ಉಪಯೋಗಿಸುತ್ತಾನೆ. ಈ ಅಧಿಕಾರದ ಆಧಾರದಲ್ಲೇ ಅನೇಕ ದೊಡ್ಡ ವ್ಯಕ್ತಿಗಳು ದೇವನ ದಾಸರ ಮೇಲೆ ತಮ್ಮ ದೇವತ್ವವನ್ನು ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ತಮ್ಮ ಶಕ್ತಿಗಳನ್ನು ಸತ್ಯದ ಬದಲು ಶೋಷಣೆಗಾಗಿ ಉಪಯೋಗಿಸಿದ್ದಾರೆ.

ಇದಕ್ಕೆ ಪ್ರತಿಯಾಗಿ ಇಸ್ಲಾಮಿನ ಉಪವಾಸ ವ್ರತ ವ್ಯಕ್ತಿಗೆ ಮನಸ್ಸು ಮತ್ತು ದೇಹದ ಮೇಲೆ ಅಧಿಕಾರ ದೊರಕಿಸಿ ಕೊಡುತ್ತದೆ. ಈ ರೀತಿ ರೂಪುಗೊಂಡ ವ್ಯಕ್ತಿತ್ವ ನಿರಂಕುಶ ವ್ಯಕ್ತಿತ್ವವಾಗಿರುವುದಿಲ್ಲ. ಬದಲಾಗಿ ದೇವನ ಮತ್ತು ಅವನ ಕಾನೂನುಗಳ ಅನುಸರಣೆ ಮಾಡುವ ವ್ಯಕ್ತಿತ್ವವಾಗಿರುತ್ತದೆ. ಆ ವ್ಯಕ್ತಿತ್ವ ತಿಳಿಗೇಡಿಯಲ್ಲ, ತನಗೆ ತಾನೇ ಮಾರ್ಗದರ್ಶಿಯಲ್ಲ. ಬದಲಾಗಿ ದೇವನ ವತಿಯಿಂದ ಬಂದ ಮಾರ್ಗದರ್ಶನ, ಜ್ಞಾನ ಮತ್ತು ಸುವ್ಯಕ್ತ ಗ್ರಂಥದ ಮಾರ್ಗದರ್ಶನದಂತೆ ನಡೆಯುವ ವ್ಯಕ್ತಿತ್ವವಾಗಿದೆ. ಅದು ದೇವನು ದಯಪಾಲಿಸಿರುವ ದೇಹ ಮತ್ತು ಮನಸ್ಸನ್ನು ತನ್ನ ಸೊತ್ತೆಂದು ಭಾವಿಸುವುದಿಲ್ಲ. ಆದ್ದರಿಂದ ಅದು ದೇಹ ಮತ್ತು ಆತ್ಮವನ್ನು ನಿಯಂತ್ರಣದಲ್ಲಿರಿಸಿ ತನ್ನಿಚ್ಛೆಯಂತೆ ಅದರ ಮೇಲೆ ಆಳ್ವಿಕೆ ನಡೆಸುವುದಿಲ್ಲ. ಬದಲಾಗಿ ಅದು ದೇಹ ಮತ್ತು ಮನಸ್ಸನ್ನು ದೇವನು ದಯಪಾಲಿಸಿರುವ ಅಮಾನತ್ತೆಂದು ಭಾವಿಸುತ್ತದೆ. ಆದ್ದರಿಂದ ಈ ಅಮಾನತ್ತಿನ ಮೇಲೆ ದೇವೇಚ್ಛೆಗೆ ಅನುಸಾರ ಆಳ್ವಿಕೆ ನಡೆಸುತ್ತದೆ.

ತನ್ನ ವ್ಯಕ್ತಿತ್ವವನ್ನು ಅಲ್ಲಾಹನ ಇಚ್ಛೆಗೆ ಅಧೀನಗೊಳಿಸಿರುವ ಸತ್ಯ ಸಂಧನೂ ಸತ್ಯ ವಿಶ್ವಾಸಿಯೂ ಆದ ವ್ಯಕ್ತಿ ಲೋಕದ ಯಾವುದೇ ವಸ್ತುವಿನ ಮೇಲೆ ಶೋಷಣೆಯೆಸಗಲು ಸಾಧ್ಯವಿಲ್ಲ. ಹಾಗಿರುವಾಗ ತನ್ನ ಮೃಗೀಯ ದೇಹದ ಹಕ್ಕು ಚ್ಯುತಿ ಮಾಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ದೇಹವೆಂಬ ಈ ಸಂಗಾತಿಯನ್ನು ದೇವನು ಜೀವಿತಾವಧಿಯುದ್ದಕ್ಕೂ ಜತೆಗಿರುವ ಅತ್ಯುತ್ತಮ ಸಹಾಯಕನ ರೂಪದಲ್ಲಿ ದಯಪಾಲಿಸಿದ್ದಾನೆ. ಆದ್ದರಿಂದ ಅವನು ಅದಕ್ಕೆ ಅನ್ಯಾಯವೆಸಗುವುದಿಲ್ಲ. ಅವನು ಉತ್ತಮೋತ್ತಮ ಆಹಾರವನ್ನು ಅದಕ್ಕೆ ಉಣಿಸುತ್ತಾನೆ, ಅತ್ಯುತ್ತಮ ಉಡುಗೆಯನ್ನು ತೊಡಿಸುತ್ತಾನೆ, ಅತ್ಯುತ್ತಮ ಮನೆಯಲ್ಲಿ ಅದನ್ನು ನೆಲೆಗೊಳಿಸುತ್ತಾನೆ, ಅದಕ್ಕೆ ಗರಿಷ್ಠ ಆರಾಮ ಒದಗಿಸುತ್ತಾನೆ, ಅದರೆಲ್ಲಾ ಸ್ವಾಭಾವಿಕ ಆಸಕ್ತಿಗಳನ್ನು ತಣಿಸುವ ವ್ಯವಸ್ಥೆ ಮಾಡುತ್ತಾನೆ. ಮನಸ್ಸು ಅದನ್ನು ಬಯಸುತ್ತದೆಂಬ ಕಾರಣಕ್ಕಾಗಿ ಅವನು ಹಾಗೆ ಮಾಡುವುದಿಲ್ಲ. ದೇವನು ಅದರ ಹಕ್ಕನ್ನು ನಿಶ್ಚಯಿಸಿದ್ದಾನೆ, ಆದ್ದರಿಂದ ಅದರ ಹಕ್ಕನ್ನು ನೀಡುವುದರಿಂದ ದೇವ ಸಂಪ್ರೀತಿ ಗಳಿಸಬಹುದೆಂಬುದು ಅವನ ಇಂಗಿತವಾಗಿರುತ್ತದೆ*. ಆದರೆ

---

** ಆದ್ದರಿಂದಲೇ ಪ್ರವಾದಿವರ್ಯರು(ಸ) ಹೇಳಿದರು: 'ನಿನಗಾಗಿ ದಾನ ಮಾಡು, ಅನಂತರ ನಿನ್ನ*

ಅದೇ ಮನಸ್ಸು ಉತ್ತಮ ಆಹಾರ ಸೇವನೆ ಮಾಡಲಿಕ್ಕಾಗಿ ನಿಷಿದ್ಧ ಆಹಾರ ಅಥವಾ ನಿಷಿದ್ಧ ಸಂಪಾದನೆಯನ್ನು ಬಯಸಿದಾಗ, ಉತ್ತಮ ಬಟ್ಟೆ ಬರೆ, ವಾಹನ ಮತ್ತು ವಸತಿಯನ್ನು ಪಡೆಯಲಿಕ್ಕಾಗಿ ಅಲ್ಲಾಹನು ಇಷ್ಟಪಡದಂತಹ ಯುಕ್ತಿಯನ್ನು ಪಾಲಿಸಬೇಕೆಂದು ಬಯಸಿದಾಗ, ತನ್ನ ಲೈಂಗಿಕ ತೃಷೆಯನ್ನು ತಣಿಸಲು ಅಲ್ಲಾಹನು ಮುಚ್ಚಿರುವಂತಹ ದ್ವಾರಗಳನ್ನು ಅದು ತೆರೆಯ ಬಯಸಿದಾಗ, ಅಲ್ಲಾಹನು ಅದರ ಮೇಲೆ ವಿಧಿಸಿರುವಂತಹ ಸೇವೆಗಳನ್ನು ಪರಿಪಾಲಿಸುವ ಸಂದರ್ಭದಲ್ಲಿ ತನ್ನ ಆರಾಮದ ನಿಮಿತ್ತ ಆಲಸ್ಯ ಪ್ರದರ್ಶಿಸಿದಾಗ, ತನ್ನ ಮತ್ತು ತನ್ನ ಬಯಕೆಗಳ ತ್ಯಾಗಕ್ಕೆ ಸನ್ನದ್ಧರಾಗಬೇಕೆಂಬುದು ಅಲ್ಲಾಹನಿಚ್ಛೆಯಾಗಿರುವ ಸಂದರ್ಭದಲ್ಲಿ ಅದು ಅಂತಹ ತ್ಯಾಗಕ್ಕೆ ಹಿಂದಡಿಯಿಡತೊಡಗಿದಾಗ- ತನ್ನ ಆಜ್ಞಾಧಿಕಾರಗಳನ್ನು ಸತ್ಯವಿಶ್ವಾಸಿಯ ವ್ಯಕ್ತಿತ್ವ ಶಕ್ತಿಯುತವಾಗಿ ಉಪಯೋಗಿಸುವುದು. ಅದು ಮನಸ್ಸನ್ನು ಬಂಡಾಯ ಮತ್ತು ಅವಿಧೇಯತೆಯ ಮಾರ್ಗದಿಂದ ಸರಿಸಿ ವಿಧೇಯತೆಯ ಸನ್ಮಾರ್ಗಕ್ಕೆ ತರುತ್ತದೆ.

ರಮಝಾನ್ ತಿಂಗಳಲ್ಲಿ ಈ ರೀತಿಯ ಅಭ್ಯಾಸವನ್ನೇ ಸತ್ಯವಿಶ್ವಾಸಿಗೆ ಮಾಡಲಾಗುತ್ತದೆ. ಲೋಕದ ಈ ಪರೀಕ್ಷಾಗೃಹದಲ್ಲಿ ಸಂಕೀರ್ಣ ಸನ್ನಿವೇಶಗಳು ಪ್ರತಿನಿತ್ಯ ಎದುರಾಗುತ್ತವೆ. ಇಂತಹ ಸಂದರ್ಭಗಳು ಎದುರಾದಾಗಲೆಲ್ಲಾ ಮಾನವ ಮನಸ್ಸೆಂಬ ಪ್ರಬಲ ಪ್ರಾಣಿಯನ್ನು ನಿಯಂತ್ರಣದಲ್ಲಿಡಲು ಅವನ ಸಂಕಲ್ಪದಾರ್ಢ್ಯತೆ ವಿಫಲವಾಗಬಾರದು ಎಂಬುದೇ ಈ ಅಭ್ಯಾಸಗಳ ಉದ್ದೇಶ.

## ವೈಯಕ್ತಿಕ ತರಬೇತಿಯ ಸಂಕ್ಷಿಪ್ತ ಚಿತ್ರಣ

ಇಲ್ಲಿಯ ತನಕ ಪ್ರಸ್ತಾವಿಸಲಾದ ವಿಚಾರ ವೈಯಕ್ತಿಕ ತರಬೇತಿಗೆ ಸಂಬಂಧಿಸಿದ್ದಾಗಿತ್ತು. ಇನ್ನು ಉಪವಾಸದ ಸಾಮೂಹಿಕ ಅಂಶದ ಕಡೆಗೆ ಗಮನ ಹರಿಸುವ ಮೊದಲು ವೈಯಕ್ತಿಕ ತರಬೇತಿಯ ಈ ಕಾರ್ಯಕ್ರಮದ ಕಡೆಗೆ ಸ್ವಲ್ಪ ದೃಷ್ಟಿ ಹರಿಸಿ-

ಇದಕ್ಕೆ ಮೊದಲು ಪ್ರಸ್ತಾವಿಸಲಾಗಿರುವಂತೆ ಇಸ್ಲಾಮಿನ ನೈಜ ಉದ್ದೇಶ ಮಾನವ

---

*ಕುಟುಂಬಸ್ಥರಿಗಾಗಿ, ತದನಂತರ ಇತರರಿಗೆ'. ನಿನಗಾಗಿ ಮತ್ತು ಕುಟುಂಬಸ್ಥರಿಗಾಗಿ ದಾನ ಮಾಡುವುದು ನಮಗೆ ವಿಚಿತ್ರ ವಿಭಾವನೆಯೆಂದು ತೋರುತ್ತದೆ. ಆದರೆ ವಾಸ್ತವಿಕವಾಗಿ ಇಸ್ಲಾಮಿನ ದೃಷ್ಟಿಕೋನವೇ ಲೋಕದ ಇತರ ದೃಷ್ಟಿಕೋನಗಳಿಗಿಂತ ಭಿನ್ನವಾಗಿದೆ. ಕೇವಲ ತನ್ನ ಮನಸೇಚ್ಛೆಯ ಈಡೇರಿಕೆಗಾಗಿ ಆಹಾರ ಸೇವನೆ ಮಾಡುವವನು ಬರೇ ತಿನ್ನುತ್ತಾನಷ್ಟೆ. ಆದರೆ ತನ್ನ ನ್ಯಾಯೋಚಿತ ಸಂಪಾದನೆಯಿಂದ ತನ್ನ ದೇಹಕ್ಕೆ ಆಹಾರ ನೀಡಿ, ಹೆಂಡತಿ-ಮಕ್ಕಳ ಹೊಟ್ಟೆ ಹೊರೆಯುವವನು ನಿಜವಾಗಿ ಪುಣ್ಯಕಾರ್ಯವೆಸಗುತ್ತಾನೆ. ಅನ್ನದ ಒಂದೊಂದು ತುತ್ತಿಕ ಪ್ರತಿಯಾಗಿಯೂ ಅವನು ದೇವನಿಂದ ಪುಣ್ಯ ಫಲವನ್ನು ಪಡೆಯಲು ಬಾಧ್ಯಸ್ಥನಾಗಿದ್ದಾನೆ. ಆದ್ದರಿಂದಲೇ ಪ್ರವಾದಿವರ್ಯರು(ಸ) ಹೇಳಿದರು, 'ಸತ್ಯ ವಿಶ್ವಾಸಿಯ ಸ್ಥಿತಿ ಮೂಸಾರ ತಾಯಿಯಂತಿವೆ. ಆಕೆ ತನ್ನ ಮಗುವಿಗೇ ಹಾಲುಣಿಸಿದರು ಮತ್ತು ಅದಕ್ಕೆ ಪ್ರತಿಯಾಗಿ ಸಂಭಾವನೆಯನ್ನೂ ಪಡೆದರು. ಅದೇ ರೀತಿ ಸತ್ಯವಿಶ್ವಾಸಿ ತನ್ನ ಮತ್ತು ತನ್ನ ಹೆಂಡತಿ-ಮಕ್ಕಳ ಹಕ್ಕನ್ನು ನೀಡುತ್ತಾನೆ. ಅದಕ್ಕೆ ಪ್ರತಿಯಾಗಿ ದೇವನಿಂದ ಪುಣ್ಯವನ್ನೂ ಸಂಪಾದಿಸುತ್ತಾನೆ.'*

ನಾಗರಿಕತೆಯನ್ನು ಒಳಿತು ಮತ್ತು ಸುಧಾರಣೆಯ ಆಧಾರದಲ್ಲಿ ನಿರ್ಮಿಸಬಲ್ಲ, ಅತ್ಯುತ್ತಮ ಸಮೂಹವೊಂದನ್ನು ರಚಿಸುವುದಾಗಿದೆ. ಆದರೆ ಈ ಉದ್ದೇಶಕ್ಕಾಗಿ ಅದು ಕೇವಲ ಸಾಮೂಹಿಕ ನಿಯಮಗಳನ್ನು ರೂಪಿಸಿ ಈ ನಿಯಮಗಳ ಆಧಾರದಲ್ಲಿ ನಾಗರಿಕ ವ್ಯವಸ್ಥೆಯನ್ನು ರೂಪಿಸುವುದಕ್ಕೆ ತನ್ನನ್ನು ಸೀಮಿತಗೊಳಿಸುವುದಿಲ್ಲ. ಅದರ ಜತೆಗೆ ತನ್ನ ಸಾಮೂಹಿಕ ವ್ಯವಸ್ಥೆಗೆ ವ್ಯಕ್ತಿಗಳನ್ನು ಸಿದ್ಧಪಡಿಸುವ ಏರ್ಪಾಟನ್ನೂ ಅದು ಮಾಡುತ್ತದೆ. ಯಾವ ವ್ಯಕ್ತಿಗಳಿಂದ ಆ ಸಮೂಹ ರಚನೆಗೊಂಡಿದೆಯೋ ಆ ಪೈಕಿ ಪ್ರತಿಯೊಬ್ಬನೂ ತನ್ನ ವಿಚಾರ, ಚಾರಿತ್ರ್ಯ ಮತ್ತು ನಡವಳಿಕೆಗಳಲ್ಲಿ ಆ ವ್ಯವಸ್ಥೆಯೊಂದಿಗೆ ಸಂಪೂರ್ಣ ಸಹಮತ ಹೊಂದಿರಬೇಕು, ಅವನು ಬಂಡಾಯ ಪ್ರವೃತ್ತಿಯ ಜತೆಗೆ ಅನಿವಾರ್ಯವಾಗಿ ಅನುಸರಣೆ ಕೈಗೊಳ್ಳುವವನಾಗಿರಬಾರದು, ಬದಲಾಗಿ ತನ್ನ ಆತ್ಮ ಹಾಗೂ ಮನಸ್ಸಿನ ಸಂಪೂರ್ಣ ಸನ್ನದ್ಧತೆ, ತನ್ನ ಮನ-ಮಸ್ತಿಷ್ಕಗಳ ನಿಸ್ಪೃಹ ವಿಶ್ವಾಸ ಮತ್ತು ತನ್ನ ಚಾರಿತ್ರ್ಯದ ವೈಯಕ್ತಿಕ ಬಲದ ಮೂಲಕ ಅನುಸರಣೆ ಮಾಡುವವರಾಗಿರಬೇಕು. ಈ ಯೋಜನೆಯಲ್ಲಿ ಉಪವಾಸದ ಸ್ತಂಭದಿಂದ ಪಡೆಯಲಾದ ಪ್ರಯೋಜನ ಈ ಕೆಳಗಿನಂತಿದೆ-

1) ಈ ತರಬೇತಿಯ ಮೂಲಕ ಸಮೂಹದ ಪ್ರತಿಯೊಬ್ಬ ವ್ಯಕ್ತಿಯನ್ನು ಜಗದೊಡೆಯನ ಪ್ರಭುತ್ವದೆದುರು ತನ್ನ ಸ್ವಾಧಿಕಾರದಿಂದ ಉದ್ದೇಶಪೂರ್ವಕ ಮುಕ್ತನಾಗಲು ಸಿದ್ಧಪಡಿಸಲಾಗುತ್ತದೆ. ಈ ರೀತಿ ಅವನು ತನ್ನ ಸಮಸ್ತ ಜೀವನವನ್ನು ದೈವಿಕ ನಿಯಮಕ್ಕೆ ಬದ್ಧಗೊಳಿಸುವಂತೆ ಮಾಡಲಾಗುತ್ತದೆ.

2) ಉಪವಾಸ ವ್ರತದ ಪ್ರಾಯೋಗಿಕ ಅಭ್ಯಾಸಗಳ ಮೂಲಕ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ದೇವನು ಪ್ರತ್ಯಕ್ಷ ಮತ್ತು ಪರೋಕ್ಷಗಳ ಜ್ಞಾನಿಯಾಗಿದ್ದಾನೆ ಮತ್ತು ಪರಲೋಕದಲ್ಲಿ ಪ್ರತಿಯೊಂದು ಕರ್ಮಗಳ ವಿಚಾರಣೆ ನಡೆಯಬೇಕಾಗಿದೆ ಎಂಬ ವಿಶ್ವಾಸವನ್ನು ಜಾಗೃತಗೊಳಿಸಲಾಗುತ್ತದೆ. ಪರಿಣಾಮವಾಗಿ ಅವನು ಸ್ವತಃ ಜವಾಬ್ದಾರಿಕೆಯ ಪ್ರಜ್ಞೆಯಿಂದ, ಯಾವುದೇ ಬಾಹ್ಯ ಒತ್ತಡವಿಲ್ಲದೆ ದೇವ ಕಾನೂನುಗಳನ್ನು ಬಹಿರಂಗವಾಗಿಯೂ ಗೋಪ್ಯವಾಗಿಯೂ ಅನುಸರಿಸಲು ಸಿದ್ಧನಾಗುತ್ತಾನೆ.

3) ತನ್ನ ವಿಶ್ವಾಸ ಮತ್ತು ಕರ್ಮದ ಮೂಲಕ ಅಲ್ಲಾಹನ ಹೊರತು ಬೇರೆಲ್ಲರ ದಾಸ್ಯ ಮತ್ತು ಅನುಸರಣೆಯ ಬಗ್ಗೆ ನಿರಾಕರಣೆಯನ್ನು ವ್ಯಕ್ತ ಪಡಿಸುವಂತಹ ಸ್ಫೂರ್ತಿಯನ್ನು ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಜಾಗೃತಗೊಳಿಸಲಾಗುತ್ತದೆ. ಅಲ್ಲಾಹನಿಗೆ ಮಾತ್ರವೇ ಅವನ ಅನುಸರಣೆ ಸೀಮಿತವಾಗಿರಬೇಕು. ಯಾವುದೇ ಆಜ್ಞೆ, ಕಾನೂನು ಅಥವಾ ಅಧಿಕಾರದ ಕುರಿತು ಅಲ್ಲಾಹನ ದೃಢೀಕರಣ ಇಲ್ಲದಿದ್ದರೆ, ಅದರ ಅನುಸರಣೆಯ ಬಗ್ಗೆ ಸತ್ಯವಿಶ್ವಾಸಿಯ ಮನದಲ್ಲಿ ಯಾವುದೇ ಸನ್ನದ್ಧತೆ ಇರಕೂಡದು.

4) ತನ್ನ ಇಚ್ಛೆಗಳ ಬಗ್ಗೆ ವಸ್ತುಶಃ ಪೂರ್ಣ ನಿಯಂತ್ರಣ ಇರುವ ರೀತಿಯಲ್ಲಿ ವ್ಯಕ್ತಿಯನ್ನು ತರಬೇತುಗೊಳಿಸಲಾಗುತ್ತದೆ. ತನ್ನ ವಿಶ್ವಾಸ, ಜ್ಞಾನ ಮತ್ತು ಅಂತರ್ದೃಷ್ಟಿಯ ಆಧಾರದಲ್ಲಿ ವ್ಯಕ್ತಿ ತನ್ನೆಲ್ಲಾ ಮಾನಸಿಕ ಮತ್ತು ದೈಹಿಕ ಶಕ್ತಿಗಳ ಬಗ್ಗೆ ಪೂರ್ಣಾಧಿಕಾರ

ಹೊಂದಿರಬೇಕು. ಅವನಲ್ಲಿ ತಾಳ್ಮೆ, ಸ್ಮರಣೆ, ಕಠಿಣಶ್ರಮ, ದೇವನ ಮೇಲಿನ ಭರವಸೆ, ಸ್ಥಿರತೆ ಮತ್ತು ಏಕಾಗ್ರತೆಯ ಗುಣ ವಿಶೇಷತೆಗಳು ಬೆಳೆಯಬೇಕು. ಅವನು ಬಾಹ್ಯ ಪ್ರೇರಣೆ ಮತ್ತು ತನ್ನ ಮನಸ್ಸಿನ ಸಲ್ಲದ ಪ್ರಲೋಭನೆಗಳನ್ನು ಎದುರಿಸುವಂತಹ ನೈತಿಕ ಬಲ ಅವನಲ್ಲಿ ಬೆಳೆಯಬೇಕು.

ಈ ಉದ್ದೇಶಕ್ಕಾಗಿಯೇ ಇಸ್ಲಾಮಿ ಸಮೂಹದ ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಉಪವಾಸ ವ್ರತವನ್ನು ಇಸ್ಲಾಮ್ ಕಡ್ಡಾಯಗೊಳಿಸಿದೆ. ಪ್ರೌಢ-ವಿವೇಕಯುತ ಸ್ತ್ರೀ-ಪುರುಷರ ಪೈಕಿ ಯಾರೂ ಈ ಕರ್ತವ್ಯದಿಂದ ಮುಕ್ತರಲ್ಲ. ರೋಗ, ಯಾತ್ರೆ ಅಥವಾ ಇನ್ನಾವುದಾದರೂ ನ್ಯಾಯಸಮ್ಮತ ನೆವನಗಳಿಗಾಗಿ ಯಾರಾದರೂ ಈ ಕರ್ತವ್ಯವನ್ನು ಪಾಲಿಸದಾದರೆ ಅದಕ್ಕೆ ಪ್ರತಿಯಾಗಿ ಅವನು ಕಝಾ ಉಪವಾಸ ವ್ರತ ಅಥವಾ ಪರಿಹಾರದ ವ್ಯವಸ್ಥೆ ಮಾಡಬೇಕು. ಒಟ್ಟಿನಲ್ಲಿ ಇಸ್ಲಾಮಿನ ವರ್ತುಲದೊಳಗಿರುತ್ತಾ ಯಾವುದೇ ಉಪವಾಸ ವ್ರತದ ಪಾಲನೆಯಿಂದ ಮುಕ್ತನಾಗುವಂತಿಲ್ಲ.

ಉಪವಾಸ ವ್ರತದ ಮೂಲಕ ಅದು ವ್ಯಕ್ತಿಯಲ್ಲಿ ಬೆಳೆಸಬಯಸುವ ಗುಣವಿಶೇಷತೆಗಳೆಲ್ಲವೂ ಪರಿಪೂರ್ಣ ರೂಪದಲ್ಲಿ ಬೆಳೆಯಬೇಕೆಂದಿಲ್ಲ. ಯಾಕೆಂದರೆ ಈ ರೀತಿಯ ಗುಣ ವಿಶೇಷತೆಗಳು ಬೆಳೆಯಲು ಮತ್ತು ಅದು ಪರಿಪೂರ್ಣಗೊಳ್ಳಲು ವೈಯಕ್ತಿಕ ಅರ್ಹತೆಯೂ ಮುಖ್ಯವಾಗಿದೆ. ಆದರೆ ಈ ತರಬೇತಿ ವ್ಯವಸ್ಥೆಯಲ್ಲಿ ಮಾನವನಲ್ಲಿ ಈ ಗುಣವಿಶೇಷತೆಗಳನ್ನು ಬೆಳೆಸುವಂತಹ ಅಂಶ ಸ್ವಭಾವತಃ ಅಸ್ತಿತ್ವದಲ್ಲಿದೆ. ಮಾತ್ರವಲ್ಲ ಅಂತಹ ಗುಣವಿಶೇಷತೆಗಳನ್ನು ಬೆಳೆಸಲು ಅದಕ್ಕಿಂತ ಉತ್ತಮ ಅಥವಾ ಅದಕ್ಕಿಂತ ಭಿನ್ನವಾದ ಬೇರೊಂದು ತರಬೇತಿ ವ್ಯವಸ್ಥೆಯನ್ನು ಸೂಚಿಸುವಂತಿಲ್ಲ. ಸಮಸ್ತ ಜನ ಸಮೂಹ ಇಸ್ಲಾಮಿನ ವರ್ತುಲದೊಳಕ್ಕೆ ಪ್ರವೇಶಿಸಿ ಸಹಜವಾಗಿಯೇ ಚಾರಿತ್ರ್ಯದ ತರಬೇತಿ ಪಡೆಯುವಂತಹ, ವ್ಯಕ್ತಿತ್ವ ನಿರ್ಮಾಣದ ವ್ಯಾಪಕ ವ್ಯವಸ್ಥೆಯನ್ನು ಇಸ್ಲಾಮ್ ಮಾಡಿದೆ. ಯಾವುದೇ ವ್ಯಕ್ತಿ ಸತ್ಯಸಂಧತೆಯೊಂದಿಗೆ ನೋಡಿದರೆ ಈ ವಾಸ್ತವಿಕತೆಯನ್ನು ಸಮ್ಮತಿಸದೇ ಇರಲಾರ.

ಅದರ ಇನ್ನೊಂದು ಚಮತ್ಕಾರವೇನೆಂದರೆ ಸಮಾಜದ ಪರಿಧಿಯೊಳಗೆ ಸಾಮೂಹಿಕ ವ್ಯವಸ್ಥೆಯ ಭಾಗವಾಗಿ ಉಳಿಯಲಾರದ ವ್ಯಕ್ತಿಯೊಬ್ಬ ಅಸ್ತಿತ್ವದಲ್ಲಿದ್ದರೆ ಅವನು ಸ್ವತಃ ವ್ಯಕ್ತವಾಗುತ್ತಾನೆ. ಅವನು ಯಾವುದೇ ನ್ಯಾಯಸಮ್ಮತ ಕಾರಣವಿಲ್ಲದೆ ಉಪವಾಸ ವ್ರತ ತೊರೆದರೆ ಅದು ತಕ್ಷಣವೇ ಸಮಾಜದಲ್ಲಿ ಬಟ್ಟ ಬಯಲಾಗುತ್ತದೆ. ದೇವನ ಪ್ರಭುತ್ವವನ್ನು ಸಮ್ಮತಿಸದ ಮತ್ತು ತನ್ನ ಮೃಗೀಯ ಸ್ವಭಾವದ ಪಾಲನೆ ಮಾಡುವ ಕಪಟಿಯೊಬ್ಬ ಸಮಾಜದ ಮಧ್ಯೆ ಇದ್ದಾನೆಂದು ವ್ಯಕ್ತವಾಗುತ್ತದೆ. ಈ ಸುವ್ಯಕ್ತವಾದ ಸೂಚನೆಯ ಮೂಲಕ ಸಮಾಜಕ್ಕೆ ತನ್ನ ದೇಹದಲ್ಲಿರುವ ಕೊಳೆತ ಅಂಗವೊಂದರ ಅಸ್ತಿತ್ವದ ಬಗ್ಗೆ ತಕ್ಷಣ ಅರಿವಾಗುತ್ತದೆ. ಅದರ ವಿಷಪ್ರಭಾವದಿಂದ ತನ್ನನ್ನು ಮುಕ್ತಗೊಳಿಸಿಕೊಳ್ಳುವ ಸಂದರ್ಭ ಅದಕ್ಕೆ ಒದಗುತ್ತದೆ. ಕನಿಷ್ಠ ಪಕ್ಷ ಇಸ್ಲಾಮ್ ಕಪಟವಿಶ್ವಾಸಿಗಳನ್ನು ಗುರುತಿಸುವ ಪರಿಪೂರ್ಣ ವ್ಯವಸ್ಥೆ ಮಾಡಿದೆ. ಸರಿಯಾದ ಸಂದರ್ಭದಲ್ಲಿ ಇಂತಹ ವ್ಯಕ್ತಿಗಳ ಅಸ್ತಿತ್ವದ ಬಗ್ಗೆ ಅರಿತು ಒಂದೋ ಅವರನ್ನು ಸುಧಾರಿಸುವ ಇಲ್ಲವೇ ಅವರನ್ನು ತಮ್ಮ ವರ್ತುಲದಿಂದ ಹೊರಗಿಡುವಂತಹ ಅವಕಾಶವನ್ನು

ಅದು ಪ್ರತಿಯೊಂದು ಮುಸ್ಲಿಮ್ ಸಮಾಜಕ್ಕೆ ಕಲ್ಪಿಸಿದೆ. ಇನ್ನು ಯಾವುದೇ ನಾಮಮಾತ್ರದ ಮುಸ್ಲಿಮ್ ಸಮಾಜ ಅದರಿಂದ ಪ್ರಯೋಜನ ಪಡೆದು, ಅಂತಹ ವ್ಯಕ್ತಿಗಳನ್ನು ತಮ್ಮ ತಲೆಯ ಮೇಲೆ ಕೂರಿಸಿ, ಪೋಷಿಸಿ ಅವರ ಪರವಾಗಿ ಯಶಸ್ಸಿನ ಘೋಷಣೆ ಮೊಳಗಿಸಿದರೆ, ಅದು ಬೇರೆ ವಿಚಾರ.

## ಉಪವಾಸದ ಸಾಮೂಹಿಕ ಸ್ವರೂಪ

ನಮಾಝಿನಂತೆ ಉಪವಾಸ ವ್ರತವೂ ವೈಯಕ್ತಿಕ ಕರ್ಮವಾಗಿದೆ. ಆದರೆ ನಮಾಝ್ ಸಾಮೂಹಿಕವಾಗಿ ನಿರ್ವಹಿಸಬೇಕೆಂಬ ಶರ್ತ ವಿಧಿಸಿ ಅದನ್ನು ಸಾಮೂಹಿಕ ಕರ್ಮವಾಗಿ ಮಾರ್ಪಡಿಸಲಾಗಿದೆ. ಅದೇ ರೀತಿ ಕಿಂಚಿತ್ ಯುಕ್ತಿಯನ್ನು ಬಳಸಿ ಉಪವಾಸ ವ್ರತವನ್ನೂ ವೈಯಕ್ತಿಕ ಕರ್ಮದ ಬದಲು ಸಾಮೂಹಿಕ ಕರ್ಮವಾಗಿ ಮಾರ್ಪಡಿಸಲಾಗಿದೆ. ಆ ಮೂಲಕ ಅದರ ಪ್ರಯೋಜನಗಳನ್ನು ಎಣೆಯಿಲ್ಲದಷ್ಟು ಹೆಚ್ಚಿಸಲಾಗಿದೆ. ಉಪವಾಸ ಆಚರಣೆ ಮಾಡಲು ನಿರ್ದಿಷ್ಟ ತಿಂಗಳನ್ನು ನಿಶ್ಚಯಿಸಲಾಗಿರುವುದೇ ಈ ಯುಕ್ತಿ. ವಿಧಿ ಕರ್ತನ ಉದ್ದೇಶ ಕೇವಲ ಜನರ ವೈಯಕ್ತಿಕ ತರಬೇತಿಯಾಗಿದ್ದರೆ ಪ್ರತಿಯೊಬ್ಬ ವ್ಯಕ್ತಿ ವರ್ಷದಲ್ಲಿ ಎಂದಾದರೂ ಮೂವತ್ತು ದಿನ ಉಪವಾಸ ಆಚರಿಸಬೇಕು ಎಂಬ ಆಜ್ಞೆ ನೀಡುವುದು ಪರ್ಯಾಪ್ತವೆನಿಸುತ್ತಿತ್ತು. ಆ ಮೂಲಕ ಉಪವಾಸದ ಪ್ರಸ್ತಾವಿತ ಉದ್ದೇಶಗಳೆಲ್ಲವೂ ಈಡೇರುತ್ತಿತ್ತು. ಮಾತ್ರವಲ್ಲ ಆತ್ಮ ನಿಯಂತ್ರಣದ ಅಭ್ಯಾಸಕ್ಕೆ ಅದು ಅತ್ಯಂತ ಸೂಕ್ತವೆನಿಸಿಕೊಳ್ಳುತ್ತಿತ್ತು. ಏಕೆಂದರೆ ಸಾಮೂಹಿಕವಾಗಿ ಉಪವಾಸ ಆಚರಿಸುವಾಗ ವ್ಯಕ್ತಿಗೆ ಲಭ್ಯವಾಗುವ ಸೌಲಭ್ಯ ವೈಯಕ್ತಿಕವಾಗಿ ಉಪವಾಸ ಆಚರಿಸುವಾಗ ದೊರೆಯುವುದಿಲ್ಲ. ವೈಯಕ್ತಿಕವಾಗಿ ಉಪವಾಸ ಆಚರಿಸುವಾಗ ಪ್ರತಿಯೊಬ್ಬ ವ್ಯಕ್ತಿಗೆ ತನ್ನ ಮನೋದಾರ್ಢ್ಯತೆಯನ್ನು ಹೆಚ್ಚು ಒತ್ತುಕೊಟ್ಟು ಉಪಯೋಗಿಸಬೇಕಾಗುತ್ತದೆ. ಆದರೆ ಇಸ್ಲಾಮಿನ ಕಾನೂನನ್ನು ರೂಪಿಸಿರುವ ಯುಕ್ತಿಜ್ಞನ ದೃಷ್ಟಿಯಲ್ಲಿ ಉತ್ತಮ ಸಮಾಜವನ್ನು ನಿರ್ಮಿಸಲು ಸಹಕಾರಿಯಾಗದ ಇಂತಹ ವ್ಯಕ್ತಿತ್ವದ ನಿರ್ಮಾಣ ನಿರರ್ಥಕವೆನಿಸಿದೆ. ಆದ್ದರಿಂದ ಅವನು ಉಪವಾಸ ವ್ರತವನ್ನು ಕೇವಲ ವೈಯಕ್ತಿಕ ಕರ್ಮವನ್ನಾಗಿ ಮಾಡಿಲ್ಲ. ಬದಲಾಗಿ ವರ್ಷದಲ್ಲೊಂದು ತಿಂಗಳನ್ನು ಉಪವಾಸ ಆಚರಿಸಲು ನಿಗದಿ ಪಡಿಸಿದ್ದಾನೆ. ಮುಸ್ಲಿಮರೆಲ್ಲರೂ ಏಕಕಾಲಕ್ಕೆ ಉಪವಾಸ ಆಚರಿಸಬೇಕು ಮತ್ತು ಆ ಮೂಲಕ ವ್ಯಕ್ತಿಯನ್ನು ನಿರ್ಮಿಸಲು ಸಹಕಾರಿಯಾಗುವ ಆ ವ್ಯವಸ್ಥೆ ಅತ್ಯುತ್ತಮ ಸಾಮೂಹಿಕ ವ್ಯವಸ್ಥೆಯನ್ನು ನಿರ್ಮಿಸಲಿಕ್ಕೂ ಸಹಕಾರಿಯಾಗಬೇಕೆಂಬುದು ಇದರ ಉದ್ದೇಶ.

ಉಪವಾಸದ ನೈತಿಕ ಮತ್ತು ಆಧ್ಯಾತ್ಮಿಕ ಪ್ರಯೋಜನಗಳಲ್ಲಿ ಈ ಯುಕ್ತಿಪೂರ್ಣ ಉಪಾಯದಿಂದ ಅನೇಕ ಹೆಚ್ಚಳಗಳಾಗಿವೆ. ಅದರ ಕಡೆಗೆ ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಬೊಟ್ಟುಮಾಡಬಹುದಾಗಿದೆ.

## ದೇವಭಯದ ವಾತಾವರಣ

ಸಾಮೂಹಿಕ ಕರ್ಮದ ವಿಶೇಷತೆಯೇನೆಂದರೆ ಅದರಿಂದ ವಿಶಿಷ್ಟ ಸ್ವರೂಪದ ಮಾನಸಿಕ

ವಾತಾವರಣ ಬೆಳೆಯುತ್ತದೆ. ಒಬ್ಬ ನಿರ್ದಿಷ್ಟ ಮಾನಸಿಕ ಸ್ಥಿತಿಯೊಂದಿಗೆ ವೈಯಕ್ತಿಕವಾಗಿ ಯಾವುದಾದರೊಂದು ಕೆಲಸ ಮಾಡುತ್ತಿದ್ದಾನೆಂದಿಟ್ಟುಕೊಳ್ಳಿ. ಅವನ ಸುತ್ತಮುತ್ತಲಿನ ಜನರಲ್ಲಿ ಅಂತಹ ಮನೋಭಾವನೆಯಿಲ್ಲದಿದ್ದರೆ ಮತ್ತು ಅವರು ಅವನಿಗೆ ಯಾವುದೇ ಸಹಕಾರ ನೀಡದಿದ್ದರೆ, ಅವನಿಗೆ ಆ ಪರಿಸರದಲ್ಲಿ ಅಪರಿಚಿತತೆಯ ಅನುಭವವಾಗುವುದು. ಅವನ ಮನೋಭಾವನೆ ಕೇವಲ ಅವನ ವ್ಯಕ್ತಿತ್ವಕ್ಕೆ ಸೀಮಿತವಾಗಿರುವುದು ಮತ್ತು ಅದು ಬರೇ ಅವನ ಮಾನಸಿಕ ಶಕ್ತಿಗಳ ಮೇಲೆ ಅಧಿಷ್ಠಿತವಾಗಿರುವುದು. ಅದನ್ನು ವೃದ್ಧಿಸಲು ಅವನ ಪರಿಸರದಿಂದ ಅವನಿಗೆ ಯಾವುದೇ ರೀತಿಯ ಸಹಕಾರ ಲಭ್ಯವಾಗದು. ಅದಕ್ಕೆ ಪ್ರತಿಯಾಗಿ ಪರಿಸರದ ಪ್ರಭಾವದಿಂದ ಅವನ ಮನೋಭೂಮಿಕೆ ವೃದ್ಧಿಸುವ ಬದಲು ಕ್ಷೀಣಿಸುವುದು. ಇದರ ಬದಲು ಸಮಸ್ತ ಪರಿಸರದಲ್ಲಿ ಇಂತಹ ಮನೋಸ್ಥಿತಿ ಆವರಿಸಿಕೊಂಡಿದ್ದರೆ, ಎಲ್ಲರೂ ಒಂದೇ ರೀತಿಯ ಚಿಂತನೆ ಮತ್ತು ಭಾವನೆಯೊಂದಿಗೆ ಕಾರ್ಯ ಪ್ರವೃತ್ತರಾದರೆ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿರುವುದು. ಆಗ ಸಮಸ್ತ ಸಮೂಹದಲ್ಲಿ ಏಕ ತೆರನಾದ ಭಾವನೆ ಆವರಿಸಿಕೊಂಡಿರುವಂತಹ ವಾತಾವರಣವಿರುವುದು. ಇದರಿಂದ ವ್ಯಕ್ತಿಯ ಅಂತಃ ಪ್ರಜ್ಞೆ ಬಾಹ್ಯ ಪರಿಸರದಿಂದ ಪ್ರಭಾವಿತಗೊಂಡು ವೃದ್ಧಿಸುತ್ತಾ ಹೋಗುತ್ತದೆ. ಒಬ್ಬ ವ್ಯಕ್ತಿ ತಾನು ಮಾತ್ರವೇ ನಗ್ನನಾಗಿದ್ದು ಸುತ್ತು ಮುತ್ತಲಿನವರೆಲ್ಲಾ ಬಟ್ಟೆ ಧರಿಸಿದ್ದರೆ ಅವನೆಷ್ಟು ನಾಚಿಗೆಗೇಡಿಗೆ ತುತ್ತಾಗಬಹುದು? ಅಂತಹ ಪರಿಸರದಲ್ಲಿ ನಗ್ನನಾಗಿರಬೇಕಾದರೆ ಅವನಲ್ಲಿ ಲಜ್ಜಾಹೀನತೆ ಹೆಚ್ಚು ಪ್ರಮಾಣದಲ್ಲಿ ಬೇಕಾದೀತು. ಅದರ ಹೊರತಾಗಿಯೂ ಪರಿಸರದ ಪ್ರಭಾವದಿಂದ ಅವನ ಲಜ್ಜಾಹೀನತೆ ಅನೇಕ ಸಲ ಪರಾಭವಗೊಳ್ಳಬಹುದು. ಆದರೆ ಒಂದೇ ಸ್ನಾನಗೃಹದಲ್ಲಿ ಎಲ್ಲರೂ ನಗ್ನರಾಗಿದ್ದರೆ ಬಡಪಾಯಿ ಲಜ್ಜೆಗೆ ಆ ಪರಿಸರದಲ್ಲಿ ಸುಳಿಯುವ ಅವಕಾಶವೂ ಇರಲಾರದು. ಅಲ್ಲಿ ಪ್ರತಿಯೊಬ್ಬರ ಲಜ್ಜಾಹೀನತೆ ಇನ್ನೊಬ್ಬರ ಲಜ್ಜಾಹೀನತೆಯಿಂದ ಸಹಾಯ ಪಡೆದು ವೃದ್ಧಿಸುತ್ತಾ ಹೋಗ ಬಹುದು.

ಒಬ್ಬೊಬ್ಬ ಸೈನಿಕ ಪ್ರತ್ಯೇಕವಾಗಿ ಯುದ್ಧ ಮಾಡುವುದು ಮತ್ತು ಯುದ್ಧದ ಮಾರಕ ಪರಿಣಾಮವನ್ನನುಭವಿಸುವುದು ಎಷ್ಟು ದುಸ್ತರ ಕಾರ್ಯ? ಆದರೆ ಸೇನಾ ದಂಡೇ ಮುಂದೆ ಸಾಗುತ್ತಿದ್ದರೆ, ಧೈರ್ಯ ಮತ್ತು ಶೌರ್ಯದ ಮಹಾಪೂರವೇ ಉಬ್ಬರಿದಿದ್ದರೆ ಪ್ರತಿಯೊಬ್ಬ ಸೈನಿಕ ಪ್ರಮತ್ತನಾಗಿ ಸಾಗರದಂತೆ ಮುಂದಕ್ಕೆ ಹರಿಯುತ್ತಾ ಸಾಗುವನು.

ಒಳ್ಳೆಯ ಅಥವಾ ಕೆಟ್ಟ ಭಾವನೆಯ ವೃದ್ಧಿಯಲ್ಲಿ ಸಾಮೂಹಿಕತೆಯ ಅಪ್ರತಿಮ ಪಾತ್ರ ವಹಿಸುತ್ತದೆ. ಸಮೂಹ ಒಂದೆಡೆ ಸೇರಿ ಕೆಡುಕಿನಲ್ಲಿ ನಿರತವಾಗಿದ್ದರೆ ಅಶ್ಲೀಲತೆ, ಲಜ್ಜಾಹೀನತೆ ಮತ್ತು ದಷ್ಟತ್ವದ ಭಾವನೆಗಳು ಉಕ್ಕೇರುತ್ತದೆ. ಸಮೂಹ ಒಂದೆಡೆ ಸೇರಿ ಸತ್ಕಾರ್ಯವೆಸಗುತ್ತಿದ್ದರೆ ಪಾವನಭಾವನೆ ಮತ್ತು ಸತ್‌ಚಿಂತನೆಯ ಸಾಗರವೇ ಉಕ್ಕೇರುತ್ತದೆ. ಇಂತಹ ಪರಿಸರದಲ್ಲಿ ಎಂತಹ ಕೆಟ್ಟ ಮನುಷ್ಯನಾದರೂ ಅನತಿ ಹೊತ್ತಿಗಾದರೂ ಸದ್ವ್ಯಕ್ತಿಗಳಾಗಿ ಮಾರ್ಪಡುತ್ತಾರೆ.

ಸಾಮೂಹಿಕ ಉಪವಾಸಕ್ಕೊಂದು ತಿಂಗಳನ್ನು ನಿಶ್ಚಯಿಸಿ ವಿಧಿಕರ್ತನು ರಮಝಾನಿನಿಂದ ಇದನ್ನೇ ಸಾಧಿಸಿದ್ದಾನೆ. ಪ್ರತಿಯೊಂದು ಧಾನ್ಯ ಸೂಕ್ತ ಕಾಲದಲ್ಲಿ ಟಿಸಿಲೊಡೆದು ಚೆನ್ನಾಗಿ ಬೆಳೆದು ನಾಲ್ಕೂ ನಿಟ್ಟಿನಲ್ಲಿ ಹೊಲವನ್ನು ತುಂಬಿಕೊಂಡಿರುವುದನ್ನು ನೀವು ಕಾಣುತ್ತೀರಿ. ಅದೇ

ರೀತಿ ರಮಝಾನ್ ತಿಂಗಳು ಒಳಿತು, ಸುಧಾರಣೆ, ದೇವಭಕ್ತಿ ಮತ್ತು ಪರಿಶುದ್ಧತೆಯ ತಿಂಗಳಾಗಿದೆ. ಆ ತಿಂಗಳಲ್ಲಿ ಕೆಡುಕುಗಳು ಕಡಿಮೆಯಾಗುತ್ತದೆ, ಒಳಿತು ವೃದ್ಧಿಸುತ್ತದೆ, ಸಮಸ್ತ ವಾತಾವರಣದಲ್ಲಿ ದೇವಭಯ ಮತ್ತು ಸದಾಚಾರದ ಸ್ಫೂರ್ತಿ ಕವಿಯುತ್ತದೆ. ದೇವಭಯದ ಹೊಲ ಎಲ್ಲೆಡೆ ಹಸಿರಾಗಿ ನಳನಳಿಸುತ್ತಿರುವುದನ್ನು ನೀವು ಕಾಣುತ್ತೀರಿ. ಆ ಕಾಲದಲ್ಲಿ ಪಾಪ ಕಾರ್ಯವೆಸಗಲು ವ್ಯಕ್ತಿ ನಾಚಿಗೆ ಪಡುತ್ತಾನೆ. ಪ್ರತಿಯೊಬ್ಬ ವ್ಯಕ್ತಿ ಸ್ವತಃ ಪಾಪಕಾರ್ಯಗಳಿಂದ ಮುಕ್ತವಾಗಿರಲು ಪ್ರಯತ್ನಿಸುತ್ತಾನೆ ಮತ್ತು ತನ್ನ ಯಾರಾದರೂ ಸಹೋದರ ಪಾಪವೆಸಗುತ್ತಿದ್ದರೆ ಅವನಲ್ಲಿ ನಾಚಿಗೆಯನ್ನು ಬೆಳೆಸುತ್ತಾನೆ. ಯಾವುದಾದರೂ ಸತ್ಕಾರ್ಯವೆಸಗಬೇಕೆಂಬುದು ಪ್ರತಿಯೋರ್ವನ ಇಚ್ಛೆಯಾಗಿರುತ್ತದೆ. ಬಡವನಿಗೆ ಉಣಬಡಿಸುವುದು, ನಗ್ನನಿಗೆ ಬಟ್ಟೆ ತೊಡುವುದು, ಸಂಕಷ್ಟದಲ್ಲಿರುವವರಿಗೆ ನೆರವಾಗುವುದು, ಯಾರಾದರೂ ಸತ್ಕರ್ಮವೆಸಗುತ್ತಿದ್ದರೆ ಅದರಲ್ಲಿ ಭಾಗವಹಿಸುವುದು, ದುಷ್ಕಾರ್ಯವೆಸಗುತ್ತಿರುವವನನ್ನು ತಡೆಯುವುದು ಮುಂತಾದವುಗಳು ಜನರ ಆಸಕ್ತಿಯಾಗಿರುತ್ತದೆ. ಆಗ ಜನರ ಮನಸ್ಸು ಮೃದುವಾಗಿರುತ್ತದೆ, ಶೋಷಣೆಯಿಂದ ಜನರು ತಡೆದು ನಿಲ್ಲುತ್ತಾರೆ, ಕೆಡುಕಿನ ಬಗ್ಗೆ ದ್ವೇಷ ಮತ್ತು ಒಳಿತಿನ ಆಸಕ್ತಿ ಬೆಳೆಯುತ್ತದೆ, ಪಾಶ್ಚಾತ್ತಾಪ, ದೇವಭಯ ಮತ್ತು ದೇವನೆಡೆಗೆ ಮರಳುವಂತಹ ಮನೋಭಾವವನ್ನು ಜನರು ಬೆಳೆಸಿಕೊಳ್ಳುತ್ತಾರೆ. ಸದ್ವ್ಯಕ್ತಿಗಳು ಮಹಾ ಸದಾಚಾರಿಗಳಾಗುತ್ತಾರೆ. ಕೆಟ್ಟ ವ್ಯಕ್ತಿಯ ಕೆಡುಕು ಒಳಿತಾಗಿ ಮಾರ್ಪಡದಿದ್ದರೂ ಈ ಕಲ್ಮಶದ ನಿವಾರಣೆಗೆ ಅವನು ಶುದ್ಧೀಕರಣಕ್ಕೆ ಈಡಾಗುತ್ತಾನೆ. ಒಟ್ಟಿನಲ್ಲಿ ಈ ಪ್ರಬಲ ಯುಕ್ತಿಪೂರ್ಣ ವಿಧಾನದ ಮೂಲಕ, ವರ್ಷಂಪ್ರತಿ ಒಂದು ತಿಂಗಳ ಅವಧಿಗೆ ಸಮಸ್ತ ಇಸ್ಲಾಮೀ ಸಮಾಜದ ಶುದ್ಧೀಕರಣದ ವ್ಯವಸ್ಥೆಯನ್ನು ವಿಧಿಕರ್ತನು ಮಾಡಿದ್ದಾನೆ. ಮುಸ್ಲಿಮ್ ಸಮಾಜದ ಶುಚೀಕರಣ, ಆಮೂಲಾಗ್ರ ಸುಧಾರಣೆ ಮತ್ತು ಇಸ್ಲಾಮೀ ಸ್ಫೂರ್ತಿಯ ನವೋತ್ಥಾನದ ವ್ಯವಸ್ಥೆಯನ್ನು ಈ ಮೂಲಕ ಮಾಡಲಾಗಿದೆ. ಆದ್ದರಿಂದಲೇ ಪ್ರವಾದಿವರ್ಯರು(ಸ) ಹೇಳಿದ್ದಾರೆ,

اذا دخل رمضان فتحت ابواب الجنّة و غلّقت ابواب جهنّم
و سلسلت الشّيطين.

"ರಮಝಾನ್ ಬಂತೆಂದರೆ ಸ್ವರ್ಗದ ಕವಾಟಗಳನ್ನು ತೆರೆಯಲಾಗುತ್ತದೆ. ನರಕದ ಕವಾಟಗಳನ್ನು ಮುಚ್ಚಲಾಗುತ್ತದೆ ಮತ್ತು ಪಿಶಾಚಿಯನ್ನು ಬಂಧಿಸಿಡಲಾಗುತ್ತದೆ"

ಇನ್ನೊಂದು ಪ್ರವಾದಿವಚನದಲ್ಲಿ ಹೀಗೆ ಹೇಳಲಾಗಿದೆ,

اذا كان اوّل ليلة من شهر رمضان عقدت الشّيطين و
مردة الجنّ وغلّقت ابواب النار فلم يفتح منها بابٌ و ينادى منادٍ يا
باغى الخير اقبل و يا باغى الشّر اقصر.

"ರಮಝಾನಿನ ಒಂದನೇ ತಾರೀಕು ಆಗತವಾದಾಗ ಪಿಶಾಚಿ ಮತ್ತು ಬಂಡೆದ್ದ ಜಿನ್ನ್‌ಗಳನ್ನು ಬಂಧಿಸಲಾಗುತ್ತದೆ. ನರಕದೆಡೆಗೊಯ್ಯುವ ಬಾಗಿಲುಗಳನ್ನು ಮುಚ್ಚಿಬಿಡಲಾಗುತ್ತದೆ. ಆ ಪೈಕಿ ಯಾವ ಬಾಗಿಲುಗಳೂ ತೆರೆದಿರುವುದಿಲ್ಲ. ಸ್ವರ್ಗದೆಡೆಗೊಯ್ಯುವ ಬಾಗಿಲುಗಳನ್ನು

ತೆರೆಯಲಾಗುತ್ತದೆ. ಆ ಪೈಕಿ ಯಾವ ಬಾಗಿಲೂ ಮುಚ್ಚಿರುವುದಿಲ್ಲ. ಆಗ ಕರೆ ಕೊಡುವವನು ಕರೆ ಕೊಡುತ್ತಾನೆ, ಒಳಿತನ್ನು ಬಯಸುವವನೇ ಮುಂದುವರಿ ಮತ್ತು ಕೆಡುಕನ್ನು ಬಯಸುವವನೇ ನಿಲ್ಲು."

ಅಪಸ್ಮಾರ ರೋಗಿಯ ಕೊನೆಯ ಪರೀಕ್ಷೆಗಾಗಿ ಅವನ ಮೂಗಿನ ಬಳಿ ಕನ್ನಡಿಯಿರಿಸಲಾಗುತ್ತದೆ. ಕನ್ನಡಿ ಸ್ವಲ್ಪ ಮಸುಕಾದರೆ ಜೀವವಿನ್ನೂ ಉಳಿದಿದೆ ಎಂದು ಭಾವಿಸಲಾಗುತ್ತದೆ. ಅನ್ಯಥಾ ಅವನು ಬದುಕಿರಬಹುದೆಂಬ ಅಂತಿಮ ನಿರೀಕ್ಷೆಯೂ ಕೊನೆಗೊಳ್ಳುತ್ತದೆ. ಅದೇ ರೀತಿ ಮುಸ್ಲಿಮರ ಯಾವುದೇ ಜನವಾಸ ಪ್ರದೇಶವನ್ನು ಪರೀಕ್ಷಿಸ ಬಯಸುವುದಾದರೆ ರಮಝಾನ್ ತಿಂಗಳಲ್ಲಿ ಅದನ್ನು ಪರೀಕ್ಷಿಸಬೇಕು. ಈ ತಿಂಗಳಲ್ಲಿ ಅವರ ಬಳಿ ಧರ್ಮನಿಷ್ಠೆ, ದೇವಭಯ ಮತ್ತು ಒಳಿತಿನ ಆಸಕ್ತಿ ಕಿಂಚಿತ್ತಾದರೂ ಕಂಡು ಬಂದರೆ, ಸಮುದಾಯ ಇನ್ನೂ ಬದುಕಿದೆ ಎಂದು ಭಾವಿಸಿಕೊಳ್ಳಿ. ಈ ತಿಂಗಳಲ್ಲೂ ಒಳಿತಿನುತ್ಸಾಹ ಕ್ಷೀಣಿಸಿದ್ದರೆ, ಕೆಡುಕು ಮತ್ತು ಭ್ರಷ್ಟತೆಯ ಲಕ್ಷಣಗಳು ಸುವ್ಯಕ್ತವಾಗಿದ್ದರೆ, ಸ್ಫೂರ್ತಿ ಕುಂದಿದ್ದರೆ 'إِنَّا لِلّٰهِ وَإِنَّا إِلَيْهِ رَاجِعُونَ' 'ಇನ್ನಾಲಿಲ್ಲಾಹಿ ವಇನ್ನಾ ಇಲೈಹಿ ರಾಜಿಊನ್' ಓದಿ ಬಿಡಿ. ಅನಂತರ ಅಲ್ಲಿ ಮುಸ್ಲಿಮನ ಪಾಲಿಗೆ ಜೀವಂತಿಕೆಯ ಯಾವುದೇ ಉಸಿರು ಕಂಡು ಬರಲಾರದು.*

## ಸಾಮೂಹಿಕ ಸ್ಫೂರ್ತಿ

ಸಾಮೂಹಿಕ ಕರ್ಮದಿಂದಾಗುವ ಇನ್ನೊಂದು ಪ್ರಯೋಜನವೇನೆಂದರೆ ಇದರಿಂದ ಜನರಲ್ಲಿ ಸ್ವಾಭಾವಿಕ ಮತ್ತು ನೈಜ ಐಕಮತ್ಯ ಮೂಡುತ್ತದೆ. ಜನಾಂಗ, ಭಾಷೆ, ರಾಷ್ಟ್ರ ಅಥವಾ ಆರ್ಥಿಕ ಹಿತಾಸಕ್ತಿಗಳು ಸಮಾನವಾಗಿರುವ ಮಾತ್ರಕ್ಕೆ ಸ್ವಾಭಾವಿಕ ಸಾಮುದಾಯಿಕ ಮನೋಭಾವ ಬೆಳೆಯಲು ಸಾಧ್ಯವಿಲ್ಲ. ಚಿಂತನೆ ಮತ್ತು ಕರ್ಮದಲ್ಲಿ ಸಮಾನತೆಯಿದ್ದಾಗ

---

** ಇದು ಪರೀಕ್ಷೆಯ ಇಸ್ಲಾಮೀ ಮಾನದಂಡವಾಗಿದೆ. ಆದರೆ ಈ ಪರೀಕ್ಷೆಗೆ ಈಗ ಬೇರೆ ಮಾನದಂಡಗಳು ಹುಟ್ಟಿಕೊಂಡಿವೆ. ಮುಸ್ಲಿಮರ ಯಾವುದೇ ಜನವಾಸ ಪ್ರದೇಶ ದಾಸ್ಯಕ್ಕೆ ಗುರಿಯಾಗಿದ್ದರೆ ಅಲ್ಲಿ ಇಂತಹ ಪರೀಕ್ಷೆಗೆ ಬಳಸುವ ವಿಧಾನವೇ ಬೇರೆ. ಸಮುದಾಯದ 'ಆರ್ಥಿಕ ಮತ್ತು ರಾಜಕೀಯ' ಹಿತಾಸಕ್ತಿಗಾಗಿ ಅವರಲ್ಲೆಷ್ಟು ತುಡಿತವಿದೆ? ಈ ಹಿತಾಸಕ್ತಿಯ ಸಂರಕ್ಷಣೆಗಾಗಿ ಅವರೆಷ್ಟು ಒಗ್ಗೂಡಿ ಘೋಷಣೆ ಕೂಗ ಬಲ್ಲರು? ಅವರ ಸಭೆಗಳಲ್ಲಿ ಇಸ್ಲಾಮ್ ಮತ್ತು ಇಸ್ಲಾಮೀ ಸಮುದಾಯದ ಹೆಸರನ್ನು ಎಷ್ಟು ಭಾವಾವೇಶದಿಂದ ಎತ್ತಲಾಗುತ್ತದೆ ಎಂಬಿತ್ಯಾದಿಗಳೇ ಈ ಮಾನದಂಡ. ಇನ್ನು ಅದು ಸ್ವತಂತ್ರ ಮುಸ್ಲಿಮ್ ಸಮಾಜವಾಗಿದ್ದರೆ ಅದರ ಮಾನದಂಡವೇ ಬೇರೆ. ಸಮುದಾಯದ ಬಳಿ ಎಷ್ಟು ವಿಮಾನಗಳಿವೆ, ಎಷ್ಟು ರೈಲು ಬಂಡಿಗಳನ್ನು ಅದು ನಿರ್ಮಿಸಿದೆ, ಎಷ್ಟು ವಿದ್ಯಾಲಯ ಮತ್ತು ಕಾರ್ಖಾನೆಗಳನ್ನು ಅದು ಸ್ಥಾಪಿಸಿದೆ, ತಮ್ಮ ಸ್ತ್ರೀಯರನ್ನು ಎಷ್ಟರ ಮಟ್ಟಿಗೆ ಅದು ಲಜ್ಜಾಹೀನರನ್ನಾಗಿ ಮಾಡಿದೆ, ನಾಗರಿಕತೆ ಮತ್ತು ಸಂಸ್ಕೃತಿಯಲ್ಲಿ ಯುರೋಪಿನೊಂದಿಗೆ ಸ್ಪರ್ಧಿಸಲು ಎಷ್ಟು ಸಫಲ ಯತ್ನ ನಡೆಸಿದೆ ಎಂಬಿತ್ಯಾದಿ ಪರೀಕ್ಷೆಗಳು. ಈ ಪರೀಕ್ಷೆಗಳಲ್ಲಿ ಯಾವುದೇ ಸಮುದಾಯ ತೇರ್ಗಡೆಯಾದರೆ 'ಅಲ್ಲಾಹನಿಗೆ ಸ್ತುತಿ' ಸಮುದಾಯವಿನ್ನೂ ಬದುಕಿದೆ ಎಂದು ಭಾವಿಸಲಾಗುತ್ತದೆ.*

ಮಾತ್ರ ಮಾನವರ ಹೃದಯಗಳು ಪರಸ್ಪರ ಬೆಸೆಯುತ್ತದೆ. ಇದು ಇಬ್ಬರು ಮಾನವರನ್ನು ಪರಸ್ಪರ ಒಟ್ಟು ಸೇರಿಸುವಂತಹ ನೈಜ ಸಂಬಂಧವಾಗಿದೆ. ಚಿಂತನೆ ಮತ್ತು ಕರ್ಮದಲ್ಲಿ ಯಾರೊಂದಿಗಾದರೂ ಸಹಮತವಿಲ್ಲದೆ ಹೋದರೆ ಹೃದಯದ ಮಿಲನ ಸಾಧ್ಯವಿಲ್ಲ. ಅದು ಏಕೋದರ ಸಹೋದರರಾಗಿದ್ದರೂ ಸರಿಯೇ. ಒಬ್ಬ ವ್ಯಕ್ತಿ ತನ್ನ ಸುತ್ತ ಮುತ್ತ ಇರುವಂತಹ ವ್ಯಕ್ತಿಗಳು ವಿಚಾರ ಮತ್ತು ಆಚಾರದಲ್ಲಿ ತನಗಿಂತ ಭಿನ್ನರೆಂದು ಮನಗಂಡಾಗ ಖಂಡಿತವಾಗಿಯೂ ಅವನಿಗೆ ಅಪರಿಚಿತತೆಯ ಅನುಭವವಾಗುತ್ತದೆ. ಇದಕ್ಕೆ ಪ್ರತಿಯಾಗಿ ಅನೇಕ ವ್ಯಕ್ತಿಗಳು ಒಂದೇ ರೀತಿಯ ಮನೋಭಾವನೆಯೊಂದಿಗೆ ಸಮಾನವಾದ ಕೆಲಸ ಮಾಡಿದರೆ ಅವರ ನಡುವೆ ಪರಸ್ಪರ ಐಕಮತ್ಯ, ಸ್ನೇಹ, ಸೌಹಾರ್ದ ಮತ್ತು ಭ್ರಾತೃತ್ವದ ಗಾಢ ಸಂಬಂಧ ಏರ್ಪಡುತ್ತದೆ. ಅವರ ನಡುವೆ ಯಾರೂ ಪರಸ್ಪರ ಅಪರಿಚಿತರಾಗುಳಿಯುವುದಿಲ್ಲ. ಮನಮಸ್ತಿಷ್ಕಗಳ ಸಂಬಂಧ ಮತ್ತು ಸಮಾನ ಕರ್ಮ ಅವರನ್ನು ಬೆಸೆದು ಒಂದಾಗಿಸುತ್ತದೆ.

ಒಳಿತಾಗಿರಲಿ, ಕೆಡುಕಾಗಿರಲಿ ಸಾಮೂಹಿಕ ಮನೋಭಾವದ ಪರಿಣಾಮ ಸದಾ ಹೀಗೆಯೇ ಇರುತ್ತದೆ. ಕಳ್ಳರ ನಡುವೆ ಕಳ್ಳತನದ ಸಮಾನ ಪ್ರವೃತ್ತಿ ಮತ್ತು ಕುಡುಕರಲ್ಲಿ ಕುಡಿತದ ಸಮಾನ ಚಟ ಇಂತಹುದೇ ಭ್ರಾತೃತ್ವವನ್ನು ಬೆಳೆಸುತ್ತದೆ. ಆದರೆ ಇದರಲ್ಲಿರುವ ವ್ಯತ್ಯಾಸವೇನೆಂದರೆ ಕೆಡುಕಿನ ಮಾರ್ಗದಲ್ಲಿ ವ್ಯಕ್ತಿಯ ವೈಯಕ್ತಿಕ ಮನೋಭಾವದ ಪಾತ್ರವಿರುತ್ತದೆ. ಅದರ ಸಹಜ ದಿಸೆ ವ್ಯಕ್ತಿಗಳನ್ನು ವಿಭಾಜಿಸಿ ಪ್ರತ್ಯೇಕಗೊಳಿಸುವ ಕಡೆಗಿದೆ. ಆದ್ದರಿಂದ ಭ್ರಾತೃತ್ವ ಇಂತಹ ಮಾರ್ಗದಲ್ಲಿ ನಿಷ್ಕಲ್ಮಶ ಮತ್ತು ಸುದೃಢವಾಗಿರುವುದಿಲ್ಲ. ಇದಕ್ಕೆ ಪ್ರತಿಯಾಗಿ ಒಳಿತಿನ ಮಾರ್ಗದಲ್ಲಿ ವ್ಯಕ್ತಿಯ ಸ್ವೇಚ್ಛೆ ಅದುಮಲ್ಪಡುತ್ತದೆ. ಮಾನವನ ಆತ್ಮಕ್ಕೆ ನೈಜ ತೃಪ್ತಿ ದೊರೆಯುತ್ತದೆ. ಪಾವನ ಮನಸ್ಸಿನೊಂದಿಗೆ ವ್ಯಕ್ತಿ ಈ ಮಾರ್ಗದಲ್ಲಿ ನಡೆಯುತ್ತಾನೆ. ಏಕೆಂದರೆ ಪಾವನ ಚಿಂತನೆ ಮತ್ತು ಸತ್ಕರ್ಮ ಒಂದೆಡೆ ಕಲೆತಾಗ ಅತ್ಯುತ್ತಮವಾದ ಭ್ರಾತೃ ಭಾವನೆಯನ್ನುಂಟುಮಾಡುತ್ತದೆ. ಅದಕ್ಕಿಂತ ಸುದೃಢವಾದ ಸಾಮೂಹಿಕ ಸಂಬಂಧವನ್ನು ಕಲ್ಪಿಸಲಿಕ್ಕೂ ಸಾಧ್ಯವಿಲ್ಲ.

ಸಾಮೂಹಿಕ ನಮಾಝಿನಂತೆ ರಮಝಾನಿನ ಸಾಮೂಹಿಕ ಉಪವಾಸ ವ್ರತವೂ ಮುಸ್ಲಿಮರಲ್ಲಿ ಇಂತಹ ಭಾತೃತ್ವವನ್ನು ಸೃಷ್ಟಿಸುತ್ತದೆ. ಜನರೆಲ್ಲರೂ ಒಂದೇ ದೇವನ ಸಂಪ್ರೀತಿಯನ್ನು ಆಕಾಂಕ್ಷಿಸುವುದು, ಅವನ ಸಂಪ್ರೀತಿಗಾಗಿ ಹಸಿವೆ-ಬಾಯಾರಿಕೆಗಳನ್ನು ಸಹಿಸುವುದು, ಅವನ ಭಯದಿಂದ ದುಷ್ಕೃತ್ಯದಿಂದ ದೂರವಿರುವುದು, ಪರಸ್ಪರರನ್ನು ಕೆಡುಕಿನಿಂದ ತಡೆಯುವುದು, ದೇವನ ಸಂಪ್ರೀತಿಯನ್ನರಸಿ ಒಳಿತಿನೆಡೆಗೆ ಧಾವಿಸುವುದು ಮತ್ತು ಪರಸ್ಪರರನ್ನು ಒಳಿತು ಮಾಡಲು ಪ್ರೇರೇಪಿಸುವುದು ಮುಂತಾದವುಗಳೆಲ್ಲವೂ ಅವರಲ್ಲಿ ಅತ್ಯುತ್ತಮ ಸ್ವರೂಪದ ಐಕಮತ್ಯ, ಸೂಕ್ತವಾದ ಸ್ವಾಭಾವಿಕ ಸಾಮುದಾಯಿಕ ಪ್ರಜ್ಞೆ, ಪಾವನವಾದ ಸಮೂಹ ಪ್ರಜ್ಞೆ ಮತ್ತು ಎಲ್ಲ ಬಗೆಯ ದೌರ್ಬಲ್ಯದಿಂದ ಮುಕ್ತವಾದ ಸಹಾನುಭೂತಿ ಮತ್ತು ಸ್ನೇಹವನ್ನು ಬೆಳೆಸುತ್ತದೆ.

## ಪರಸ್ಪರ ಸಹಕಾರ ಮನೋಭಾವ

ಈ ಸಾಮೂಹಿಕ ಆರಾಧನಾ ಕರ್ಮದಿಂದಾಗುವ ಮೂರನೆಯ ಪ್ರಬಲ ಸಾಧನೆಯೇನೆಂದರೆ

ಅದು ತಾತ್ಕಾಲಿಕವಾಗಿ ಎಲ್ಲರನ್ನೂ ಒಂದೇ ಹಂತಕ್ಕೆ ತಂದು ನಿಲ್ಲಿಸುತ್ತದೆ. ಧನಿಕನು ಧನಿಕನಾಗಿಯೇ ಇರುತ್ತಾನೆ ಮತ್ತು ಬಡವನು ಬಡವನಾಗಿಯೇ ಇರುತ್ತಾನೆ, ಅದರ ಹೊರತಾಗಿಯೂ ಹಸಿವೆಯಿಂದ ಬಳಲುವ ಸೋದರನು ಅನುಭವಿಸುವಂತಹ ಬಳಲಿಕೆಯನ್ನು ಸಿರಿವಂತನೂ ದಿನದ ಸ್ವಲ್ಪ ಗಂಟೆಗಳ ಕಾಲ ಅನುಭವಿಸಬೇಕಾಗುತ್ತದೆ. ಅದರಿಂದಾಗಿ ಅವನು ಆ ಸಂಕಷ್ಟದ ನೈಜ ಅನುಭವ ಪಡೆಯುತ್ತಾನೆ. ದೇವನ ಸಂಪ್ರೀತಿ ಗಳಿಸುವ ಆಕಾಂಕ್ಷೆ ಅವನನ್ನು ಬಡ ಸಹೋದರರಿಗೆ ನೆರವಾಗಲು ಪ್ರೇರೇಪಿಸುತ್ತದೆ. ಬಾಹ್ಯ ನೋಟಕ್ಕೆ ಇದೊಂದು ಸಾಮಾನ್ಯ ವಿಷಯವಾಗಿ ತೋರುತ್ತದೆ. ಆದರೆ ನಿಜವಾಗಿ ಇದರಿಂದಾಗುವ ನೈತಿಕ ಮತ್ತು ನಾಗರಿಕ ಪ್ರಯೋಜನಗಳಿಗೆ ಪಾರವಿಲ್ಲ. ಯಾವುದೇ ಸಮುದಾಯದಲ್ಲಿ ಸಿರಿವಂತರಿಗೆ ಬಡವರ ಸಂಕಷ್ಟಗಳ ಬಗ್ಗೆ ಅರಿವು ಮತ್ತು ಪ್ರಾಯೋಗಿಕವಾಗಿ ಅವರೊಂದಿಗೆ ಸಹಾನುಭೂತಿ ತೋರುವ ಸ್ಫೂರ್ತಿಯಿದ್ದರೆ, ಅಲ್ಲಿ ಕೇವಲ ಸಂಸ್ಥೆಗಳಿಗೆ ದಾನಧರ್ಮ ಮಾಡುವ ಬದಲು ವೈಯಕ್ತಿಕವಾಗಿ ಅಪೇಕ್ಷಿತರನ್ನು ಹುಡುಕಿ ನೆರವಾಗುವ ಪರಿಪಾಠವಿದ್ದರೆ ಆ ಸಮುದಾಯದ ದುರ್ಬಲ ಭಾಗಗಳು ನಾಶಗೊಳ್ಳದೆ ಉಳಿಯುತ್ತದೆ. ಆ ಸಮುದಾಯದ ಸಾಮೂಹಿಕ ಹಿತ ಸದಾ ಸುರಕ್ಷಿತವಾಗಿರುತ್ತದೆ. ಬಡವರ ಮತ್ತು ಸಿರಿವಂತರ ನಡುವೆ ಈರ್ಷ್ಯೆಯ ಬದಲು ಪ್ರೀತಿ, ಧನ್ಯತೆ ಮತ್ತು ಉಪಕಾರಭಾರದ ಸಂಬಂಧವಿರುತ್ತದೆ. ವರ್ಗ ಸಂಘರ್ಷ ಎಂದೂ ಅಲ್ಲಿ ಬೆಳೆಯಲು ಸಾಧ್ಯವಿಲ್ಲ. ಸಮುದಾಯದ ಸಿರಿವಂತರಿಗೆ ಬಡತನ ಮತ್ತು ಹಸಿವೆಯೇನೆಂದು ತಿಳಿದಿರದಿದ್ದರೆ, ಬರಗಾಲದಲ್ಲಿ ಜನ ಯಾಕೆ ಸಾಯುತ್ತಿದ್ದಾರೆಂದು ಅವರು ಆಶ್ಚರ್ಯ ಪ್ರಕಟಿಸುತ್ತಿದ್ದರೆ, ರೊಟ್ಟಿ ಸಿಗದಿದ್ದರೆ ಅವರೇಕೆ ಕೇಕ್ ತಿನ್ನುವುದಿಲ್ಲವೆಂದು ಅವರು ಕೇಳುವವರಾಗಿದ್ದರೆ, ಅಂತಹ ಸಮಾಜದಲ್ಲಿ ವರ್ಗ ಸಂಘರ್ಷ ಏರ್ಪಡುವುದು ಸಹಜ.

ಉಪವಾಸ ವ್ರತ ಇಸ್ಲಾಮಿನ ಎರಡನೇ ಪ್ರಾಯೋಗಿಕ ಸ್ತಂಭವಾಗಿದೆ. ಅದರ ಮೂಲಕ ಇಸ್ಲಾಮ್ ತನ್ನ ಅನುಯಾಯಿಗಳನ್ನು ವೈಯಕ್ತಿಕವಾಗಿ ನಿರ್ದಿಷ್ಟ ನೈತಿಕ ತರಬೇತಿಯ ಮೂಲಕ ಸಿದ್ಧಪಡಿಸುತ್ತದೆ ಮತ್ತು ಅವರನ್ನು ಒಟ್ಟು ಸೇರಿಸಿ ಒಂದು ಸಮೂಹವನ್ನಾಗಿ ಮಾಡುತ್ತದೆ. ಯಾವ ಅತ್ಯುತ್ತಮ ಮತ್ತು ದೈವಿಕ ಸಾಮ್ರಾಜ್ಯವನ್ನು ಸ್ಥಾಪಿಸುವುದು ಇಸ್ಲಾಮಿನ ಪರಮ ಗುರಿಯಾಗಿದೆಯೋ ಅದಕ್ಕೆ ನಮಾಝ್ ಮತ್ತು ಉಪವಾಸ ವ್ರತದ ಮೂಲಕ ಅತ್ಯುತ್ತಮ ವ್ಯಕ್ತಿಗಳ ರೂಪದಲ್ಲಿ ಬಿಡಿಭಾಗಗಳನ್ನು ಇಸ್ಲಾಮ್ ಒದಗಿಸುತ್ತದೆ. ಅದರ ಕಾರ್ಯಕರ್ತರು, ಪದಾಧಿಕಾರಿಗಳು, ಮಂತ್ರಿಗಳು, ಶಿಕ್ಷಕರು, ಪ್ರೊಫೆಸರ್‌ಗಳು, ನ್ಯಾಯಾಧೀಶರು, ಧಾರ್ಮಿಕ ವಿಧಿ ಶಾಸ್ತ್ರಜ್ಞರು, ವ್ಯಾಪಾರಿಗಳು, ಕಾರ್ಮಿಕರು, ಕೈಗಾರಿಕೋದ್ಯಮಿಗಳು, ರೈತರು ಮುಂತಾದವರ ಪೈಕಿ ಪ್ರತಿಯೊಬ್ಬರೂ ತರಬೇತಿಯಿಂದ ಪುಟಗೊಂಡವರಾಗಿರುತ್ತಾರೆ. ಅವರೆಲ್ಲರೂ ಒಟ್ಟು ಸೇರಿದರೆ 'ಪ್ರವಾದಿ ಚರ್ಯೆಗೆ ಬದ್ಧವಾದ ಖಿಲಾಫತ್' ಎನಿಸಿಕೊಳ್ಳಲರ್ಹವಾದ ನಾಗರಿಕ ಮತ್ತು ರಾಜಕೀಯ ಸತ್‌ವ್ಯವಸ್ಥೆಯೊಂದು ರೂಪು ತಾಳಬಹುದಾದಂತಹ ವ್ಯಕ್ತಿತ್ವ ಅವರಲ್ಲಿರುತ್ತದೆ. ಅನರ್ಹ ವ್ಯಕ್ತಿಗಳನ್ನು ಸೇರಿಸಿ 'ದೈವಿಕ ಖಿಲಾಫತ್'ನ ಸ್ಥಾಪನೆಗೆ ಧಾವಿಸುವುದು ಕೇವಲ ಭ್ರಮೆ ಮತ್ತು ನಿರರ್ಥಕ ಕೆಲಸವಾಗಿದೆ.

ಈ ವೈಯಕ್ತಿಕ ಮತ್ತು ಸಾಮೂಹಿಕ ತರಬೇತಿಯ ಕಾರ್ಯಕ್ರಮ ಕೊನೆಗೊಳ್ಳಬೇಕು ಎನ್ನುವಷ್ಟರಲ್ಲೇ 'ಝುಕಾತ್' ಎಂಬ ಮೂರನೇ ಸ್ತಂಭ ಆರಂಭವಾಗುತ್ತದೆ. ಆ ಬಗ್ಗೆ ನಾವು ಮುಂದೆ ಪ್ರಸ್ತಾಪಿಸುತ್ತೇವೆ.

